ಬೆಂಗಳೂರು ಮಂಗಳವಾರ, 23 ಏಪ್ರಿಲ್ 2019 ಸಂಪುಟ 26, ಸಂಚಿಕೆ 197, ಪುಟಗಳು 12+4, ಬೆಂಗಳೂರು-ಮಂಗಳೂರು-ಶಿವಮೊಗ್ಗ-ಹುಬ್ಬಳ್ಳಿ RNI: 58231/94 REG No.KA/BG GPO-2532/2018-20

ಬೆಲೆ ₹5.00

epaper.hosadigantha.com
editor@hosadigantha.in

# ಹೊಸ ದಿಗಂತ

ರಾಷ್ಟ್ರ ಜಾಗೃತಿಯ ದೈನಿಕ

ಮುಸ್ಲಿಮರಿಗೂ ಕೆಲಸ ಮಾಡಿಕೊಡುವೆ: ವರುಣ್ ೧೦

ದೇವರ ನಾಡನ್ನೂ ತಲುಪಿದ ನರೇಂದ್ರ ಮೋದಿ ಅಲೆ ೮

೫ ಫಲಿತಾಂಶದ ಬಳಿಕ ಮೈತ್ರಿ ಸರ್ಕಾರ ಪತನ: ಸಿ.ಟಿ. ರವಿ

**ಶುಭ ದಿನ** ವಿಕಾರಿ ಸಂವತ್ಸರ, ಉತ್ತರಾಯಣ, ವಸಂತ ಋತು, ಚೈತ್ರ ಮಾಸ, ಕೃಷ್ಣ ಪಕ್ಷ, ತಿಥಿ: ಚೌತಿ ನಕ್ಷತ್ರ: ಜ್ಯೇಷ್ಠ

**ದಿನದ ಮಾತು**
ಜನರ ಅಭಿವೃದ್ಧಿಯೇ ನಾಯಕನ ಅತ್ಯಂತ ಆದ್ಯತೆಯ ಕರ್ತವ್ಯ.
-ಹಾರ್ವೆ ಫೈರ್‌ಸ್ಟೋನ್

### ಶ್ರೀಲಂಕಾ ಸರಣಿ ಸ್ಫೋಟ: ಸಾವಿನ ಸಂಖ್ಯೆ 290ಕ್ಕೆ ಹೆಚ್ಚಳ
# ಐವರು ಕನ್ನಡಿಗರ ಬಲಿ

• ದಿಗಂತ ವರದಿ, ಬೆಂಗಳೂರು

ಶ್ರೀಲಂಕಾದ ಕೊಲಂಬೋದಲ್ಲಿ ಭಾನುವಾರ ನಡೆದ ಸರಣಿ ಬಾಂಬ್ ಸ್ಫೋಟದಲ್ಲಿ ಐವರು ಕನ್ನಡಿಗರು ಬಲಿಯಾಗಿದ್ದು, ಇನ್ನಿಬ್ಬರು ಸಂಪರ್ಕಕ್ಕೆ ಸಿಗದೆ ಆತಂಕ ಸೃಷ್ಟಿಯಾಗಿದೆ.

ಬೆಂಗಳೂರಿನ 8ನೇ ಮೈಲಿಯ ಕೆ.ಜಿ.ಹನುಮಂತರಾಯಪ್ಪ (56), ನೆಲಮಂಗಲ ತಾಲೂಕಿನ ಗೋವೇನಹಳ್ಳಿ ಎಚ್. ಶಿವಕುಮಾರ್ (58), ಕಾಚನಹಳ್ಳಿಯ ಮುನಿಯಪ್ಪ ರಂಗಪ್ಪ (40), ಕೆ.ಎಂ.ಲಕ್ಷ್ಮೀನಾರಾಯಣ್ (55) ಹಾಗೂ ತುಮಕೂರಿನ ಉದ್ಯಮಿ ಲಕ್ಷ್ಮಣ ಗೌಡ ರಮೇಶ್ (44) ಮೃತಪಟ್ಟ ಕನ್ನಡಿಗರು ಎಂದು ಗುರುತಿಸಲಾಗಿದೆ.

ಲಂಕಾ ನರಮೇಧ

ಇನ್ನು ಇವರ ಜತೆ ಶ್ರೀಲಂಕಾ ಪ್ರವಾಸ ಕೈಗೊಂಡಿದ್ದ ಬೆಂಗಳೂರು ಉತ್ತರ ತಾಲೂಕಿನ ಅಡಕ ಮಾರನಹಳ್ಳಿಯ ಮಾರೇಗೌಡ (42), ಅರೇಹ್ಯಾತನಹಳ್ಳಿ ಪುಟ್ಟರಾಜು ಎಂಬುವರು ನಾಪತ್ತೆಯಾಗಿದ್ದು, ಅವರ ಪತ್ತೆಕಾರ್ಯ ಮುಂದುವರಿದಿದೆ. ಈಪೈಕಿ ಬಹುತೇಕರು ಜೆಡಿಎಸ್ ಕಾರ್ಯಕರ್ತರಾಗಿದ್ದು, ಕೆಲವರು ರಿಯಲ್ ಎಸ್ಟೇಟ್ ಉದ್ಯಮದಲ್ಲಿ ತೊಡಗಿಸಿಕೊಂಡಿದ್ದರೆ, ಇನ್ನು ಕೆಲವರು ಗುತ್ತಿಗೆದಾರರಾಗಿ ಕೆಲಸ ಮಾಡುತ್ತಿದ್ದರು.

ಶ್ರೀಲಂಕಾ ಪ್ರವಾಸ ಕೈಗೊಂಡಿದ್ದ ಏಳು ಮಂದಿಯಲ್ಲಿ 5 ಮಂದಿ ಮೃತಪಟ್ಟಿರುವುದನ್ನು ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್ ಹಾಗೂ ಸಿಎಂ ಕುಮಾರಸ್ವಾಮಿ ಟ್ವಿಟ್ಟರ್‌ನಲ್ಲಿ ಖಚಿತಪಡಿಸಿದ್ದಾರೆ. ಶ್ರೀಲಂಕಾ ಬಾಂಬ್ ಸ್ಫೋಟ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಪ್ರಧಾನ ಕಾರ್ಯದರ್ಶಿ ಅಂಜುಮ್ ಪರ್ವೇಜ್‌ರನ್ನು ನೋಡಲ್ ಅಧಿಕಾರಿಯಾಗಿ ಮುಖ್ಯ ಕಾರ್ಯದರ್ಶಿಗಳು ನೇಮಕ ಮಾಡಿದ್ದು, ಅವರು ಲಂಕಾದಲ್ಲಿರುವ ಸಮನ್ವಯ ರಾಯಭಾರ ಕಚೇರಿಯೊಂದಿಗೆ ಸಮನ್ವಯ ನಡೆಸುತ್ತಿದ್ದಾರೆ. ↘೪

ಲಕ್ಷ್ಮೀ ನಾರಾಯಣ್

ಶಿವಕುಮಾರ್

ಹನುಮಂತ ರಾಯಪ್ಪ

ಲಕ್ಷ್ಮಣ ಗೌಡ

ಮುನಿಯಪ್ಪ ರಂಗಪ್ಪ

### ಕುಟುಂಬಸ್ಥರಿಗೆ ಸಾಂತ್ವನ: ವೀಸಾ ವ್ಯವಸ್ಥೆ

ಮೃತ ಲಕ್ಷ್ಮೀನಾರಾಯಣ್ ಹಾಗೂ ಗೋವೇನಹಳ್ಳಿ ಶಿವಣ್ಣ ನಿವಾಸಕ್ಕೆ ಸಂಸದ ವೀರಪ್ಪಮೊಯ್ಲಿ, ನೆಲಮಂಗಲ ಶಾಸಕ ಡಾ.ಕೆ. ಶ್ರೀನಿವಾಸಮೂರ್ತಿ, ದೊಡ್ಡಬಳ್ಳಾಪುರ ಶಾಸಕ ವೆಂಕಟರಮಣಯ್ಯ ಸೇರಿದಂತೆ ಸ್ಥಳೀಯ ಮುಖಂಡರು ಭೇಟಿ ನೀಡಿದರು. ಹನುಮಂತರಾಯಪ್ಪ ನಿವಾಸಕ್ಕೆ ಕೇಂದ್ರ ಸಚಿವ ಸದಾನಂದಗೌಡ, ದಾಸರಹಳ್ಳಿ ಮಾಜಿ ಶಾಸಕ ಮುನಿರಾಜು ಭೇಟಿ ನೀಡಿ ಕುಟುಂಬಸ್ಥರಿಗೆ ಸಾಂತ್ವನ ಹೇಳಿದರು. ↘೪

ಲಂಕಾದಲ್ಲಿ ಆತಂಕಿತ ಮಹಿಳೆ

### ಎನ್‌ಟಿಜೆ ಕೈವಾಡ?

ಶ್ರೀಲಂಕಾದಲ್ಲಿ ಸಂಭವಿಸಿದ ಭೀಕರ ಸರಣಿ ಬಾಂಬ್ ಸ್ಫೋಟ ಘಟನೆಯಲ್ಲಿ ನ್ಯಾಷನಲ್ ತೌಹೀದ್ ಜಮಾತ್ ಸಂಘಟನೆಯ ಕೈವಾಡ ಇದೆ ಎಂದು ಲಂಕಾ ಪೊಲೀಸರು ಶಂಕಿಸಿದ್ದಾರೆ. ಘಟನೆ ಸಂಬಂಧ ಈಗಾಗಲೇ 24 ಮಂದಿಯನ್ನು ಬಂಧಿಸಲಾಗಿದೆ. ಆತ್ಮಾಹುತಿ ದಾಳಿ ಎಸಗಿದವರೆಲ್ಲರೂ ಲಂಕಾ ನಿವಾಸಿಗಳೇ ಎನ್ನಲಾಗಿದೆ. ಇತ್ತೀಚಿನ ವರ್ಷಗಳ ಹಿಂದಷ್ಟೇ ಜನ್ಮ ತಾಳಿದ ಎನ್‌ಟಿಜೆ ಸಂಘಟನೆಯು ಜಾಗತಿಕ ಜಿಹಾದಿ ಸಮರದ ಗುರಿ ಹೊಂದಿದೆ ಎನ್ನಲಾಗಿದೆ. ↘೪

### 7 ಆತ್ಮಾಹುತಿ ಬಾಂಬರ್‌ಗಳ ಭಾಗಿ

**ಕೊಲಂಬೋ:** ಚರ್ಚ್ ಮತ್ತು ಪಂಚತಾರಾ ಹೊಟೇಲ್‌ಗಳಲ್ಲಿ ಸಂಭವಿಸಿದ ಸರಣಿ ಸ್ಫೋಟದಲ್ಲಿ 7 ಆತ್ಮಾಹುತಿ ಬಾಂಬರ್‌ಗಳು ಭಾಗಿಯಾಗಿದ್ದರು. ದ್ವೀಪ ರಾಷ್ಟ್ರದ ಇತಿಹಾಸದಲ್ಲೇ ಇದು ಅತ್ಯಂತ ಭೀಕರ ಭಯೋತ್ಪಾದಕ ದಾಳಿಯಾಗಿದ್ದು, ಸಾವಿನ ಸಂಖ್ಯೆ 290ಕ್ಕೆ ಏರಿಕೆಯಾಗಿದೆ. ಇತರ 500ಕ್ಕೂ ಹೆಚ್ಚು ಮಂದಿ ಗಾಯಗೊಂಡಿದ್ದು, ಕೆಲವರು ಚಿಂತಾಜನಕ ಸ್ಥಿತಿಯಲ್ಲಿದ್ದಾರೆ. ↘೪

### ತುರ್ತು ಪರಿಸ್ಥಿತಿ ಘೋಷಣೆ

ಸರಣಿ ಬಾಂಬ್ ಸ್ಫೋಟ ಹಿನ್ನೆಲೆಯಲ್ಲಿ ಶ್ರೀಲಂಕಾದಲ್ಲಿ ತುರ್ತು ಪರಿಸ್ಥಿತಿ ಘೋಷಣೆ ಮಾಡಲಾಗಿದೆ. ಶ್ರೀಲಂಕಾ ಅಧ್ಯಕ್ಷ ಮೈತ್ರಿಪಾಲ ಸಿರಿಸೇನಾ ರಾಷ್ಟ್ರಾದ್ಯಂತ ತುರ್ತು ಪರಿಸ್ಥಿತಿ ಘೋಷಣೆ ಮಾಡಿ ಆದೇಶ ಹೊರಡಿಸಿದ್ದಾರೆ. ಸ್ಥಳೀಯರ ಜತೆಕೈ ಜೋಡಿಸಿರುವ ನ್ಯಾಷನಲ್ ತವಾಹಿದ್ ಜಮಾತ್ ಉಗ್ರ ಸಂಘಟನೆಯ ಕೈವಾಡ ಇರುವ ಗುಮಾನಿ ಇದೆ. ಈಗಾಗಲೇ ತ್ವರಿತ ಕ್ರಮಗಳನ್ನು ಕೈಗೊಳ್ಳುವಂತೆ ಸೂಚಿಸಲಾಗಿದೆ ಎಂದು ಸಿರಿಸೇನಾ ತಿಳಿಸಿದ್ದಾರೆ.

### 237 ಅಭ್ಯರ್ಥಿಗಳ ಭವಿಷ್ಯ ನಿರ್ಧಾರ
# ರಾಜ್ಯದ 14 ಕ್ಷೇತ್ರಕ್ಕೆ ಇಂದು ಮತದಾನ

ನವಭಾರತ ಮತ
ಲೋಕಸಭಾ ಚುನಾವಣೆ-2019

• ದಿಗಂತ ವರದಿ, ಬೆಂಗಳೂರು

ರಾಜ್ಯದ 14 ಲೋಕಸಭಾ ಕ್ಷೇತ್ರಗಳಲ್ಲಿ ಮತದಾನ ಮುಗಿದ ಬೆನ್ನಲ್ಲೇ ಏ.23ರ ಮಂಗಳವಾರದಂದು ಇನ್ನುಳಿದ 14 ಕ್ಷೇತ್ರಗಳಿಗೆ ಮತದಾನ ನಡೆಯಲಿದೆ. ಮನೆ-ಮನೆ ಪ್ರಚಾರಕ್ಕೂ ಸೋಮವಾರ ತೆರೆ ಬಿದ್ದಿದ್ದು, ಮತದಾರರಲ್ಲದವರು ಹಾಗೂ ಅಭ್ಯರ್ಥಿಗಳಲ್ಲದ ನಾಯಕರು ಕ್ಷೇತ್ರ ಬಿಟ್ಟು ವಿಶ್ರಾಂತಿಯತ್ತ ಮುಖ ಮಾಡಿದ್ದಾರೆ.

ರಾಜ್ಯದಲ್ಲಿ 14 ಕ್ಷೇತ್ರಗಳಿಗೆ ಮೊದಲ ಹಂತದಲ್ಲಿ ನಡೆದ ಚುನಾವಣೆ ವೇಳೆ ಶೇ.68.05 ರಷ್ಟು ಪ್ರಮಾಣದ ಮತದಾನ ಆಗಿದ್ದು, ಇದು 2014ರ ಲೋಕಸಭಾ ಚುನಾವಣೆ ಸಂದರ್ಭದ ಮತದಾನ ಪ್ರಮಾಣ(ಶೇ.67.76)ಕ್ಕಿಂತ ತುಸು ಹೆಚ್ಚು ಎನ್ನಬಹುದು. ಎರಡನೇ ಹಂತದ ಚುನಾವಣೆ ಬಳಿಕ ಎಷ್ಟು ಪ್ರಮಾಣದ ಮತದಾನ ಆಗಿದೆ ಎಂಬುದನ್ನೂ ಲೆಕ್ಕ ಹಾಕಿ, ಒಟ್ಟಾರೆ ರಾಜ್ಯದ 28 ಲೋಕಸಭಾ ಕ್ಷೇತ್ರದಿಂದ ಎಷ್ಟು ಮತದಾನವಾಗಿದೆ ಎಂಬುದರ ಚಿತ್ರಣವು ಬುಧವಾರ ಸ್ಪಷ್ಟವಾಗಿ ತಿಳಿಯಲಿದೆ.

**ಮುಂಜಾನೆ 7 ರಿಂದ ಸಂಜೆ 6 ರವರೆಗೆ:** ಇದೀಗ ಎರಡನೇ ಹಂತದಲ್ಲಿ ಮಂಗಳವಾರ ನಡೆಯಲಿರುವ 14 ಲೋಕಸಭಾ ಕ್ಷೇತ್ರದ ಚುನಾವಣೆಗೆ ವೇದಿಕೆ ಸಜ್ಜಾಗಿದೆ. ಬೆಳಗ್ಗೆ 7 ಗಂಟೆಗೇ ಮತದಾನ ಪ್ರಕ್ರಿಯೆ ಆರಂಭಗೊಳ್ಳಲಿದೆ. ↘೪

ಎಲ್ಲೆಲ್ಲಿ ಮತದಾನ?

ಚಿಕ್ಕೋಡಿ, ಬೆಳಗಾವಿ, ಬಾಗಲಕೋಟೆ, ವಿಜಾಪುರ, ಕಲಬುರ್ಗಿ, ರಾಯಚೂರು, ಬೀದರ್, ಕೊಪ್ಪಳ, ಬಳ್ಳಾರಿ, ಹಾವೇರಿ, ಧಾರವಾಡ, ಉತ್ತರ ಕನ್ನಡ, ದಾವಣಗೆರೆ, ಶಿವಮೊಗ್ಗ

### ಫಲಿತಾಂಶಕ್ಕಾಗಿ 1 ತಿಂಗಳು ಕಾಯಲೇಬೇಕು

ದೇಶಾದ್ಯಂತ ಒಟ್ಟಾರೆ 7 ಹಂತಗಳಲ್ಲಿ ಮತದಾನ ಪ್ರಕ್ರಿಯೆ ನಡೆಯುತ್ತಿದ್ದು, ಕರ್ನಾಟಕದ ಪಾಲಿಗೆ ಮಂಗಳವಾರದ ಮತದಾನವೇ ಅಂತಿಮ ಹಂತ. ↘೪

### ಚುನಾವಣೆ ವಿಶೇಷ

VOTE

#### ಖರ್ಗೆ ಜಯಕ್ಕಾಗಿ ನೂರು ಕೋಟಿ ಖರ್ಚು

**ಬೆಂಗಳೂರು:** ಕಲಬುರಗಿ ಕಾಂಗ್ರೆಸ್ ಅಭ್ಯರ್ಥಿ ಮಲ್ಲಿಕಾರ್ಜುನ ಖರ್ಗೆ ಮಹಾ ಭ್ರಷ್ಟರಾಗಿದ್ದು, ಸೋಲಿನ ಭೀತಿಯಿಂದ ಚುನಾವಣೆಗೆ ನೂರು ಕೋಟಿ ಖರ್ಚು ಮಾಡಿದ್ದಾರೆ. ಈ ಸಂಬಂಧ ತನಿಖೆ ನಡೆಸಿ ಕ್ರಮ ಕೈಗೊಳ್ಳಬೇಕು ಹಾಗೂ ಸೂಕ್ಷ್ಮ ಕ್ಷೇತ್ರವೆಂದು ಪರಿಗಣಿಸುವಂತೆ ಆಯೋಗಕ್ಕೆ ಬಿಜೆಪಿ ದೂರು ನೀಡಿದೆ.

#### ಮಾಟಮಂತ್ರದ ಮೂಲಕ ಬೆದರಿಕೆ ಸಲ್ಲ: ಬಸವರಾಜು

**ತುಮಕೂರು:** ಮಾಜಿ ಪ್ರಧಾನಮಂತ್ರಿಯಾಗಿದ್ದರೂ ಪರಿಪಕ್ವತೆ ಇಲ್ಲದ ವ್ಯಕ್ತಿ ದೇವೇಗೌಡರು ಎಂದು ಮಾಜಿ ಸಂಸದ ಹಾಗೂ ಬಿಜೆಪಿ ಅಭ್ಯರ್ಥಿ ಜಿ.ಎಸ್.ಬಸವರಾಜು ಹೇಳಿದರು.

#### ಚುನಾವಣಾ ವ್ಯವಸ್ಥೆ ಬದಲಿಗೆ ತಮಟೆ ಚಳವಳಿ

**ಬೆಂಗಳೂರು:** ಸಮಗ್ರ ಚುನಾವಣಾ ವ್ಯವಸ್ಥೆ ಬದಲಾಗಬೇಕೆಂದು ಆಗ್ರಹಿಸಿ ಕನ್ನಡ ಚಳವಳಿ ವಾಟಾಳ್ ಪಕ್ಷದ ಸದಸ್ಯರು ತಮಟೆ ಚಳವಳಿ ನಡೆಸಿದರು.

#### ನೀತಿ ಸಂಹಿತೆ ಉಲ್ಲಂಘನೆ: ಬಿಜೆಪಿ ವಿರುದ್ಧ ದೂರು

**ಬಳ್ಳಾರಿ:** ಬಿಜೆಪಿ ಅವರು ನಗರದಲ್ಲಿ ಇತ್ತೀಚೆಗೆ ನಡೆಸಿದ ರ‍್ಯಾಲಿಯಲ್ಲಿ ರಾಷ್ಟ್ರಧ್ವಜ ಬಳಕೆ, ಹನುಮನ ಭಾವಚಿತ್ರವಿರುವ ಧ್ವಜಗಳನ್ನು ಬಳಕೆ ಮಾಡಿದ್ದು, ಇದು ಮಾದರಿ ಚುನಾವಣೆ ನೀತಿ ಸಂಹಿತೆ ಉಲ್ಲಂಘನೆಯಾಗಿದ್ದು, ಕೂಡಲೇ ಕ್ರಮ ಕೈಗೊಳ್ಳಬೇಕು ಎಂದು ಕಾಂಗ್ರೆಸ್ ಅಭ್ಯರ್ಥಿ ವಿ.ಎಸ್.ಉಗ್ರಪ್ಪ ಚುನಾವಣೆ ಅಧಿಕಾರಿಗಳಿಗೆ ಸೋಮವಾರ ದೂರು ಸಲ್ಲಿಸಿದರು.

• ಪುಟ ೫

#### ಮೃತ ಉಗ್ರರ ಪರ ಸೋನಿಯಾ ಕಾಳಜಿ

**ಕೋಲ್ಕತಾ:** ಭಯೋತ್ಪಾದನೆ ಕುರಿತಂತೆ ಹೊಂದಿರುವ ದ್ವಂದ್ವ ನಿಲುವು ಹೊಂದಿದೆ ಎಂದು ಬಿಜೆಪಿ ಅಧ್ಯಕ್ಷ ಅಮಿತ್ ಶಾ ಅವರು ಸೋಮವಾರ ಕಾಂಗ್ರೆಸ್‌ನ್ನು ತರಾಟೆಗೆತ್ತಿಕೊಂಡರು.

#### ಉ. ಬಂಗಾಳ, ಪಶ್ಚಿಮ ಉ.ಪ್ರ. ಬಿಜೆಪಿ ಸಾಧನೆ ವರ್ಧನೆ

**ಹೊಸದಿಲ್ಲಿ:** ದೇಶದಲ್ಲಿ ಈಗ ನಡೆಯುತ್ತಿರುವ ಮಹಾ ಚುನಾವಣೆಯಲ್ಲಿ ಉತ್ತರ ಬಂಗಾಳ ಮತ್ತು ಪಶ್ಚಿಮ ಉತ್ತರ ಪ್ರದೇಶದ ಭಾಗಗಳು ಭಾರತೀಯ ಜನತಾ ಪಾರ್ಟಿ (ಬಿಜೆಪಿ)ಗೆ ಮಾರ್ಗದರ್ಶಿ ವಲಯಗಳಾಗಲಿವೆ ಎಂಬುದಕ್ಕೆ ಕೆಲವು ನಂಬಲರ್ಹ ಕಾರಣಗಳು ಪುಷ್ಟಿ ನೀಡುತ್ತವೆ.

#### ಮೋದಿ ಸಿನಿಮಾ; ಸುಪ್ರೀಂಗೆ ಚು.ಆಯೋಗ ವರದಿ

**ಹೊಸದಿಲ್ಲಿ:** ಪ್ರಧಾನಿ ನರೇಂದ್ರ ಮೋದಿ ಜೀವನಾಧಾರಿತ ಚಿತ್ರ ಪಿಎಂ ನರೇಂದ್ರ ಮೋದಿ ಬಗ್ಗೆ ಚುನಾವಣಾ ಆಯೋಗ ಸವಿವರಾತ್ಮಕ ವರದಿಯನ್ನು ಸೋಮವಾರ ಸುಪ್ರೀಂಕೋರ್ಟ್‌ಗೆ ಸಲ್ಲಿಸಿದೆ.

• ಪುಟ ೧೦

### ಚೌಕೀದಾರ್ ಚೋರ್ ಪದ ಬಳಕೆಗೆ ರಾಗಾ ವಿಷಾದ
# ತಪ್ಪೊಪ್ಪಿಕೊಂಡ ರಾಹುಲ್

**ಹೊಸದಿಲ್ಲಿ:** ರಫೇಲ್ ಯುದ್ಧವಿಮಾನ ಖರೀದಿ ಒಪ್ಪಂದದಲ್ಲಿ ಹಗರಣವಾಗಿದೆ, ಚೌಕೀದಾರ್ ಚೋರ್ ಹೈ ಎಂದು ಸುಪ್ರೀಂಕೋರ್ಟ್ ಹೇಳಿದೆ ಎಂದು ಆರೋಪ ಮಾಡುತ್ತಿದ್ದ ರಾಹುಲ್ ಗಾಂಧಿ, ಕೊನೆಗೂ ಸುಪ್ರೀಂಕೋರ್ಟ್ ಎದುರು ತಪ್ಪೊಪ್ಪಿಕೊಂಡಿದ್ದಾರೆ.

ಚುನಾವಣೆ ಪ್ರಚಾರದ ಭರಾಟೆಯಲ್ಲಿ ಚೌಕೀದಾರ್ ಚೋರ್ ಹೈ ಎಂದು ಹೇಳಲು ಸುಪ್ರೀಂಕೋರ್ಟ್ ತೀರ್ಪನ್ನು ತಪ್ಪಾಗಿ ಬಳಸಿಕೊಂಡಿರುವುದಕ್ಕೆ ವಿಷಾದವಿದೆ ಎಂದು ಸರ್ವೋಚ್ಚ ನ್ಯಾಯಾಲಯಕ್ಕೆ ಪ್ರತಿಕ್ರಿಯೆ ನೀಡಿದ್ದಾರೆ.

**ಇಂದೂ ನಡೆಯಲಿದೆ ಸುಪ್ರೀಂ ವಿಚಾರಣೆ**

ನ್ಯಾಯಾಂಗ ನಿಂದನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಸುಪ್ರೀಂ ಸೂಚನೆಯಂತೆ ರಾಹುಲ್ ಗಾಂಧಿ ನ್ಯಾಯಾಲಯಕ್ಕೆ ಉತ್ತರ ನೀಡಿದ್ದು, ರಾಜಕೀಯ ಪ್ರಚಾರದ ವೇಳೆ ನೀಡಲಾದ ಹೇಳಿಕೆಯನ್ನು ವಿರೋಧಿಗಳು ತಪ್ಪಾಗಿ ಬಿಂಬಿಸಿದ್ದಾರೆ. ಪ್ರಚಾರದ ಭರಾಟೆಯಲ್ಲಿ ನಾನು ಹಾಗೆ ಹೇಳಿದ್ದು, ಉದ್ದೇಶಪೂರ್ವಕವಾಗಿಯೇ ಚೌಕೀದಾರ್ ಚೋರ್ ಹೈ ಎಂಬುದಾಗಿ ಹೇಳಿದ್ದೇನೆ ಎಂದು ವಿರೋಧಿಗಳು ಬಿಂಬಿಸಿದ್ದಾರೆ. ಇದಕ್ಕಾಗಿ ನಾನು ವಿಷಾದ ವ್ಯಕ್ತಪಡಿಸುತ್ತಿದ್ದು, ಮುಂದೆ ಇಂತಹ ಹೇಳಿಕೆ ನೀಡುವುದಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ. ಚೌಕೀದಾರ್ ಚೋರ್ ಹೈ ಎನ್ನುವ ಮೂಲಕ ರಾಹುಲ್ ಗಾಂಧಿಯವರು ತೀರ್ಪನ್ನು ದುರ್ಬಳಕೆ ಮಾಡಿಕೊಂಡಿದ್ದಾರೆ. ಇದು ನ್ಯಾಯಾಂಗ ನಿಂದನೆಯಾಗಿದೆ ಎಂದು ಬಿಜೆಪಿ ಸಂಸದೆ ಮೀನಾಕ್ಷಿ ಲೇಖಿ ಅವರು ಸುಪ್ರೀಂಕೋರ್ಟ್‌ಗೆ ದೂರು ಸಲ್ಲಿಸಿದರು. ಇದರಿಂದ ಕುಪಿತಗೊಂಡಿದ್ದ ಸುಪ್ರೀಂಕೋರ್ಟ್, ನಾವೆಂದೂ ಚೌಕೀದಾರ್ ಚೋರ್ ಹೈ ಎಂದು ತೀರ್ಪು ನೀಡಿಲ್ಲ. ಹಾಗಾಗಿ ರಾಹುಲ್ ಗಾಂಧಿಯವರು ಏ.22ರೊಳಗೆ ಪ್ರತಿಕ್ರಿಯೆ ನೀಡಬೇಕು ಎಂದು ನೋಟಿಸ್ ನೀಡಿತ್ತು.


#### ಪೌರತ್ವ ವಿವಾದ: ನಿರಾಳ

**ಅಮೇಥಿ:** ಕಾಂಗ್ರೆಸ್ ಅಧ್ಯಕ್ಷ ರಾಹುಲ್ ಗಾಂಧಿ ಅವರು, ಅಮೇಥಿ ಕ್ಷೇತ್ರದಲ್ಲಿ ನಾಮಪತ್ರ ಸಲ್ಲಿಸುವಾಗ ನೀಡಿರುವ ಚುನಾವಣಾ ಪ್ರಮಾಣ ಪತ್ರದಲ್ಲಿ, ಅವರ ಭಾರತೀಯ ಪೌರತ್ವ ಹಾಗೂ ಶೈಕ್ಷಣಿಕ ಅರ್ಹತೆಗಳ ಬಗ್ಗೆ ವ್ಯತ್ಯಾಸಗಳಿವೆ ಎಂದು ಸಲ್ಲಿಸಲಾಗಿದ್ದ ಆಕ್ಷೇಪಗಳನ್ನು ಚುನಾವಣಾಧಿಕಾರಿ ತಿರಸ್ಕರಿಸಿದ್ದು, ದಾಖಲೆಗಳು ಸಿಂಧುವಾಗಿವೆ ಎಂದು ತಿಳಿಸಿದ್ದಾರೆ. ಅಮೇಥಿ ಲೋಕಸಭಾ ಕ್ಷೇತ್ರದ ನಾಲ್ವರು ಪಕ್ಷೇತರ ಅಭ್ಯರ್ಥಿಗಳು, ರಾಹುಲ್ ಅವರ ಭಾರತೀಯ ಪೌರತ್ವ ಹಾಗೂ ಅವರ ಶೈಕ್ಷಣಿಕ ಅರ್ಹತೆಗಳ ಬಗ್ಗೆ ನಾಮಪತ್ರ ಪರಿಶೀಲನೆಯ ವೇಳೆ ಶನಿವಾರ ಆಕ್ಷೇಪ ಸಲ್ಲಿಸಿದ್ದರು. ಸ್ವತಂತ್ರ ಅಭ್ಯರ್ಥಿ ಧ್ರುವಲಾಲ್ ಅವರೊಂದಿಗೆ ಅಫ್ಜಲ್, ಸುರೇಶ್ ಚಂದ್ರ ಹಾಗೂ ಸುರೇಶ್ ಕುಮಾರ್, ನಾಮಪತ್ರಗಳ ಪರಿಶೀಲನೆ ನಡೆಸುತ್ತಿದ್ದ ಅಧಿಕಾರಿಗಳ ಮುಂದೆ ಶನಿವಾರ ಆಕ್ಷೇಪಣೆ ಸಲ್ಲಿಸಿದ್ದರು.

### ಕಾಂಗ್ರೆಸ್ ಅಂಜುಬುರುಕ : ಪ್ರಧಾನಿ ಮೋದಿ ವಾಗ್ದಾಳಿ
# ಭಯೋತ್ಪಾದನೆ ಎದುರಿಸಲು ದಿಟ್ಟ ಕ್ರಮ

**ಪಿಂಪಲ್‌ಗಾಂವ್ /ನಂದುರ್ಬಾರ್:** ರಾಷ್ಟ್ರೀಯ ಭದ್ರತೆ ವಿಷಯಗಳಲ್ಲಿ ಹಿಂದಿನ ಯುಪಿಎ ಆಡಳಿತವನ್ನು ಗುರಿಯಾಗಿಸಿ ಪ್ರಧಾನಿ ನರೇಂದ್ರ ಮೋದಿ ಸೋಮವಾರ ಟೀಕಾ ಪ್ರಹಾರ ಗೈದಿದ್ದಾರೆ. ಭಯೋತ್ಪಾದನೆಯನ್ನು ಎದುರಿಸಲು ತನ್ನ ಸರಕಾರ ದಿಟ್ಟ ಕ್ರಮಗಳನ್ನು ತೆಗೆದುಕೊಂಡಿತ್ತು. ಆದರೆ ಕಾಂಗ್ರೆಸ್ ನೇತೃತ್ವದ ಆಡಳಿತ ಅಂಜುಬುರುಕ ನಿಲುವು ತಳೆದಿತ್ತು ಎಂದು ಪ್ರಧಾನಿ ಕುಟುಕಿದರು.

ದ್ವೀಪ ರಾಷ್ಟ್ರ ಶ್ರೀಲಂಕಾದಲ್ಲಿ ಚರ್ಚ್‌ಗಳು ಮತ್ತು ವಿಲಾಸಿ ಹೋಟೇಲುಗಳಲ್ಲಿ ಎಂಟು ಸರಣಿ ಸ್ಫೋಟಗಳು ನಡೆದು 290 ಮಂದಿ ಅಸು ನೀಗಿದ ಒಂದು ದಿನದ ನಂತರ ಮಹಾರಾಷ್ಟ್ರ ನಾಸಿಕ್ ಜಿಲ್ಲೆಯ ಇಲ್ಲಿ ಚುನಾವಣಾ ಪ್ರಚಾರ ರ‍್ಯಾಲಿಯೊಂದರಲ್ಲಿ ಮೋದಿ ಈ ಹೇಳಿಕೆ ನೀಡಿದ್ದಾರೆ.


ತನ್ನ ಸರಕಾರ ತೆಗೆದುಕೊಂಡ ದಿಟ್ಟ ನಿಲುವಿನ ಕಾರಣ ಭಾರತದಲ್ಲಿ ಭಯೋತ್ಪಾದನೆಯನ್ನು ಮಟ್ಟ ಹಾಕಲಾಗಿದೆ. ಅದೀಗ ಜಮ್ಮು - ಕಾಶ್ಮೀರದ ಕೆಲವು ಭಾಗಗಳಿಗಷ್ಟೇ ಸೀಮಿತಗೊಳಿಸಲ್ಪಟ್ಟಿದೆ ಎಂದು ಪ್ರಧಾನಿ ಹೇಳಿದರು. ರಾಫೆಲ್ ಗುತ್ತಿಗೆ ಎಚ್‌ಎಎಲ್‌ಗೆ ಹೋಗಲು ಮೋದಿ ಬಿಟ್ಟಿರಲಿಲ್ಲ ಎಂಬ ಕಾಂಗ್ರೆಸ್‌ನ ಟೀಕೆಗೆ ಪ್ರತಿಕ್ರಿಯಿಸಿದ ಮೋದಿ, ವಿಪಕ್ಷವು ಸರಕಾರಿ ಸ್ವಾಮ್ಯದ ಉದ್ಯಮಗಳನ್ನು ನಾಶಪಡಿಸುತ್ತಿದೆ ಎಂದು ಆಪಾದಿಸಿದರು. ↘೪

> 2014ರ ಮೊದಲು ಭಾರತದಲ್ಲಿ ಎಂತಹ ಪರಿಸ್ಥಿತಿ ಇತ್ತು ? ಮುಂಬೈ, ಪುಣೆ, ಹೈದರಾಬಾದ್, ಕಾಶಿ (ವಾರಾಣಸಿ), ಅಯೋಧ್ಯಾ, ಜಮ್ಮು ಸಹಿತ ದೇಶದ ಪ್ರತಿಯೊಂದು ಮೂಲೆಯಲ್ಲೂ ಬಾಂಬ್ ಸ್ಫೋಟಗಳಾಗುತ್ತಿದ್ದವು.
> ■ ನರೇಂದ್ರ ಮೋದಿ, ಪ್ರಧಾನಿ

# ಉಗ್ರತ್ವ ಮಟ್ಟಹಾಕದಿದ್ದರೆ ಎಲ್ಲ ದೇಶಕ್ಕೂ ಕಷ್ಟ

**ಬೆಂಗಳೂರು ವಿವಿ 54ನೇ ಘಟಿಕೋತ್ಸವದಲ್ಲಿ ಉಪರಾಷ್ಟ್ರಪತಿ**

**ಬೆಂಗಳೂರು:** ಭಯೋತ್ಪಾದನೆ ಮಟ್ಟ ಹಾಕದಿದ್ದರೆ, ವಿಶ್ವದ ಎಲ್ಲಾ ದೇಶಗಳು ಕಷ್ಟ ಅನುಭವಿಸಬೇಕಾಗುತ್ತದೆ ಎಂದು ಉಪರಾಷ್ಟ್ರಪತಿ ಎಂ. ವೆಂಕಯ್ಯ ನಾಯ್ಡು ಹೇಳಿದರು. ಬೆಂಗಳೂರಿನ ಜ್ಞಾನಭಾರತಿ ಸಭಾಂಗಣದಲ್ಲಿ ಸೋಮವಾರ ಬೆಂಗಳೂರು ವಿಶ್ವವಿದ್ಯಾಲಯದ 54ನೇ ಘಟಿಕೋತ್ಸವದಲ್ಲಿ ಮಾತನಾಡಿದ ಅವರು, ಶ್ರೀಲಂಕಾಗೆ ಪ್ರವಾಸ ಹೋಗಿದ್ದವರ ಮೇಲೆ ಭಯೋತ್ಪಾದಕರು ದಾಳಿ ನಡೆಸಿದ್ದು, 215 ಅಮಾಯಕರು ಮೃತಪಟ್ಟಿದ್ದಾರೆ. ಅದರಲ್ಲಿ ಭಾರತದವರೂ ಇದ್ದಾರೆ. ಈ ದಾಳಿಯನ್ನು ಭಾರತ ಖಂಡಿಸುತ್ತದೆ ಎಂದರು.


ಭಯೋತ್ಪಾದನೆ ವಿರುದ್ಧ ಕ್ರಮ ಕೈಗೊಳ್ಳದಿದ್ದರೆ, ವಿಶ್ವದ ಎಲ್ಲಾ ದೇಶಗಳು ಕಷ್ಟ ಅನುಭವಿಸಬೇಕಾಗುತ್ತದೆ. ಉಗ್ರರಿಗೆ ಆರ್ಥಿಕ ಮತ್ತು ಎಲ್ಲಾ ರೀತಿಯ ಸಹಕಾರ ನೀಡುವವರ ಮೇಲೆ ಕ್ರಮ ಕೈಗೊಳ್ಳಬೇಕು. ಆಗ ಮಾತ್ರ ಭಯೋತ್ಪಾದನೆ ಹಂತ-ಹಂತವಾಗಿ ಮಟ್ಟ ಹಾಕಬಹುದು ಎಂದು ಸಲಹೆ ನೀಡಿದರು.

# ವೋಟಿಗಾಗಿ ನೋಟು ಕೇಸ್: ಅರ್ಜಿ ತಿರಸ್ಕರಿಸಿದ ಸುಪ್ರೀಂ

**ಹೊಸದಿಲ್ಲಿ:** ತಮಿಳುನಾಡಿನಲ್ಲಿ ಮತಕ್ಕಾಗಿ ಜನರಿಗೆ ಭಾರೀ ಪ್ರಮಾಣದಲ್ಲಿ ಹಣ ಹಂಚಿಕೆ ಮಾಡಲಾಗುತ್ತಿದೆ ಎಂದು ಆರೋಪಿಸಿ ಸಲ್ಲಿಕೆಯಾಗಿರುವ ಅರ್ಜಿ ವಿಚಾರಣೆಯನ್ನು ಸುಪ್ರೀಂಕೋರ್ಟ್ ಸೋಮವಾರ ತಿರಸ್ಕರಿಸಿದೆ.

ತಮಿಳುನಾಡಿನಲ್ಲಿ ಈಗಾಗಲೇ ಮತದಾನ ಪ್ರಕ್ರಿಯೆ ಪೂರ್ಣಗೊಂಡಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಅರ್ಜಿ ವಿಚಾರಣೆ ನಡೆಸುವುದು ಸಮಂಜಸವಲ್ಲ ಎಂದು ಹೇಳಿದ ಮುಖ್ಯ ನ್ಯಾಯಮೂರ್ತಿ ರಂಜನ್ ಗೊಗೋಯ್ ನೇತೃತ್ವದ ತ್ರಿಸದಸ್ಯ ನ್ಯಾಯಪೀಠ ಅರ್ಜಿಯನ್ನು ಸಾರಾಸಗಟಾಗಿ ತಿರಸ್ಕರಿಸಿದೆ.


ವೋಟಿಗಾಗಿ ನೋಟು ಕಾನೂನು ಬಾಹಿರ ಚಟುವಟಿಕೆ ಎಂಬ ಬಗ್ಗೆ ಟಿವಿ, ಪತ್ರಿಕೆ ಮತ್ತು ರೇಡಿಯೋಗಳಲ್ಲಿ ಜಾಗೃತಿ ಮೂಡಿಸಲು ಚುನಾವಣಾ ಆಯೋಗಕ್ಕೆ ಸೂಚನೆ ಹೊರಡಿಸಬೇಕೆಂದೂ ಅರ್ಜಿಯಲ್ಲಿ ಮನವಿ ಮಾಡಲಾಗಿತ್ತು. ಈ ಬಗ್ಗೆ ಪ್ರತಿಕ್ರಿಯಿಸುವಂತೆ ಚುನಾವಣಾ ಆಯೋಗಕ್ಕೆ ಸುಪ್ರೀಂಕೋರ್ಟ್ ಸೂಚನೆ ನೀಡಿದೆ. ರಾಜ್ಯದಲ್ಲಿ ಇದುವರೆಗೆ ಒಟ್ಟು 78.12 ಕೋಟಿ ರೂ.ಮೊತ್ತದ ಅಕ್ರಮ ನಗದನ್ನು ವಶಕ್ಕೆ ಪಡೆಯಲಾಗಿದೆ ಎಂದು ಅರ್ಜಿಯಲ್ಲಿ ಮಾಹಿತಿ ನೀಡಲಾಗಿದೆ. ಅಲ್ಲದೇ ಕೆಲವು ಪ್ರಮುಖ ಪಕ್ಷಗಳು ತಮ್ಮ ಅಭ್ಯರ್ಥಿ ಪರ ಮತ ಚಲಾಯಿಸುವಂತೆ ಕೋರಿ ಮತದಾರರಿಗೆ ತಲಾ 5000ರೂ. ಹಂಚಿಕೆ ಮಾಡಿದ್ದಾರೆ. ತಿರುಮಂಗಲಂ ಉಪಚುನಾವಣಾ ಕ್ಷೇತ್ರದ ಮಧುರೈನಲ್ಲಿ ಚುನಾವಣಾ ಆಯೋಗವನ್ನು ನಿಷ್ಕ್ರಿಯಗೊಳಿಸಲಾಗಿದೆ. ಹೀಗಾಗಿ ವೋಟಿಗಾಗಿ ನೋಟು ಚಟುವಟಿಕೆ ಮೇಲೆ ಕಣ್ಣಿಡಲು ಅಧಿಕಾರಿಗಳ ಸಂಖ್ಯೆ ಹೆಚ್ಚು ಮಾಡಬೇಕಾಗಿ ಅರ್ಜಿದಾರರು ಮನವಿ ಮಾಡಿದ್ದಾರೆ.

### ರೆಸಾರ್ಟ್‌ನಲ್ಲಿ ಮುಖ್ಯಮಂತ್ರಿ ಕುಮಾರಸ್ವಾಮಿಗೆ ಪಂಚಕರ್ಮ ಚಿಕಿತ್ಸೆ
# ರಿಲ್ಯಾಕ್ಸ್ ಮೂಡ್‌ನಲ್ಲಿ ರಾಜ್ಯ ನಾಯಕರು

• ದಿಗಂತ ವರದಿ, ಬೆಂಗಳೂರು

ಕಳೆದೊಂದು ತಿಂಗಳಿನಿಂದ ಲೋಕಸಭಾ ಚುನಾವಣಾ ಪ್ರಚಾರದಲ್ಲಿ ತಲ್ಲೀನರಾಗಿದ್ದ 14 ಕ್ಷೇತ್ರದ ಅಭ್ಯರ್ಥಿಗಳು ದಣಿವಾರಿಸಿಕೊಳ್ಳುತ್ತಿದ್ದು, ಮಂಗಳವಾರ ನಡೆಯಲಿರುವ 2ನೇ ಹಂತದ ಮತದಾನದ ನಂತರ ಪ್ರಮುಖ ಮುಖಂಡರು ಹಾಗೂ ಅಭ್ಯರ್ಥಿಗಳು ರಿಲ್ಯಾಕ್ಸ್ ಮೂಡ್‌ಗೆ ಮರಳಲಿದ್ದಾರೆ. ಮುಖ್ಯಮಂತ್ರಿ ಕುಮಾರಸ್ವಾಮಿ ಪ್ರಕೃತಿ ಚಿಕಿತ್ಸೆ ಪಡೆಯುತ್ತಿದ್ದಾರೆ.

ಮೊದಲ ಹಂತದ ಚುನಾವಣೆ ನಡೆದ ನಂತರ 14 ಕ್ಷೇತ್ರದ ಪ್ರಮುಖ ಅಭ್ಯರ್ಥಿಗಳು ವಿಶ್ರಾಂತಿಗೆ ಮೊರೆ ಹೋಗಿದ್ದರು. ತಿಂಗಳಿನಿಂದ ಚುನಾವಣಾ ಪ್ರಚಾರ, ತಂತ್ರಕ್ಕೆ ಪ್ರತಿತಂತ್ರ ಹೆಣೆಯುವುದರಲ್ಲಿ ಹೈರಾಣಾಗಿದ್ದ ಅಭ್ಯರ್ಥಿಗಳು ಹಾಗೂ ಸ್ಥಳೀಯ ನಾಯಕರು ಮತದಾನದ ನಂತರದ ದಿನ ಮನೆಯವರೊಂದಿಗೆ ವಿಶ್ರಾಂತಿ ಪಡೆದಿದ್ದಾರೆ. ಹೀಗಿದ್ದರೂ ರಾಜ್ಯದ ಮುಂದಿನ ಪಕ್ಷಗಳ ಪ್ರಮುಖರು ಎರಡನೇ ಹಂತದ ಪ್ರಚಾರದಲ್ಲಿ ಸಮಯ ಕಳೆದಿದ್ದು ಇಂದಿನ ಮತದಾನದ ಪ್ರಕ್ರಿಯೆ ನಂತರ ವಿಶ್ರಾಂತಿ ಪಡೆಯಲಿದ್ದಾರೆ.

ಮೊದಲ ಹಂತದ ಮತದಾನದ ಬಳಿಕ ಕೆಲ ಅಭ್ಯರ್ಥಿಗಳು ಮೊಬೈಲ್ ಸ್ವಿಚ್ ಆಫ್ ಮಾಡಿ ತಮ್ಮ ನಿವಾಸಗಳಲ್ಲಿ ವಿಶ್ರಾಂತಿ ಪಡೆದರೆ, ಇನ್ನು ಕೆಲ ನಾಯಕರು ಮತಯಂತ್ರಗಳು ಸ್ಟ್ರಾಂಗ್ ರೂಂ ಸೇರುವ ಮೊದಲೇ ಉತ್ತರ ಕರ್ನಾಟಕದಲ್ಲಿ ಪ್ರಚಾರಕ್ಕಾಗಿ ಸಿದ್ಧತೆ ನಡೆಸಿದ್ದರು.

#### ಬುಧವಾರದವರೆಗೆ ಸಿಎಂ ವಿಶ್ರಾಂತಿ


ಮುಖ್ಯಮಂತ್ರಿ ಕುಮಾರಸ್ವಾಮಿ ಅವರು ಉಡುಪಿಯ ಬಳಿ ಇರುವ ಸಾಯಿ ರೆಸಾರ್ಟ್‌ನಲ್ಲಿ 3 ದಿನ ವಿಶ್ರಾಂತಿ ಪಡೆಯುತ್ತಿದ್ದಾರೆ. ಶಿವಮೊಗ್ಗ ಲೋಕಸಭಾ ಕ್ಷೇತ್ರದಲ್ಲಿ ಶನಿವಾರ ಅಂತಿಮ ಹಂತದ ಪ್ರಚಾರದಲ್ಲಿ ಪಾಲ್ಗೊಂಡು ನಂತರ ವಿಶ್ರಾಂತಿ ಪಡೆಯುತ್ತಿದ್ದಾರೆ. ಬುಧವಾರದವರೆಗೂ ಸಿಎಂ ಅವರು ವಿಶ್ರಾಂತಿ ಪಡೆಯಲಿದ್ದು, ಅಂದು ಸಂಜೆ ಬೆಂಗಳೂರಿಗೆ ವಾಪಾಸಾಗಲಿದ್ದಾರೆ. ಸಾಯಿರಾಧಾ ರೆಸಾರ್ಟ್‌ನಲ್ಲಿ ವಿಶ್ರಾಂತಿ ಪಡೆಯುತ್ತಿರುವ ಸಿ.ಎಂ, ಪಂಚಕರ್ಮ ಚಿಕಿತ್ಸೆ, ಯೋಗ, ಧ್ಯಾನ, ಸಮುದ್ರಸ್ನಾನ ಇತ್ಯಾದಿಗಳ ಮೂಲಕ ವಿರಮಿಸುತ್ತಿದ್ದಾರೆ.

#### ಕೇರಳದತ್ತ ಕಟೀಲ್

ಬಿಜೆಪಿಯ ದಕ್ಷಿಣ ಕನ್ನಡ ಅಭ್ಯರ್ಥಿ ನಳಿನ್ ಕುಮಾರ್ ಚುನಾವಣೆ ಬಳಿಕ ವಿಶ್ರಮಿಸದೆ ಕೇರಳದತ್ತ ಮುಖ ಮಾಡಿದ್ದರು. ಉಡುಪಿ- ಚಿಕ್ಕಮಗಳೂರು ಅಭ್ಯರ್ಥಿ ಶೋಭಾ ಕರಂದ್ಲಾಜೆ ಉತ್ತರ ಕರ್ನಾಟಕದ ಕೆಲ ಕಡೆಗಳಲ್ಲಿ ಪ್ರಚಾರದಲ್ಲಿ ತೊಡಗಿದ್ದರು. ಬಿ.ಎಸ್.ಯಡಿಯೂರಪ್ಪ, ಸಿದ್ದರಾಮಯ್ಯ, ಕುಮಾರಸ್ವಾಮಿ, ದೇವೇಗೌಡ ಕೂಡ ಪ್ರಚಾರದಲ್ಲಿ ಭಾಗವಹಿಸಿದ್ದು, ಇಂದು ಆ ಭಾಗದಲ್ಲಿ ಮತದಾನದ ನಂತರ ಪ್ರಮುಖ ಮುಖಂಡರೆಲ್ಲ ರಿಲ್ಯಾಕ್ಸ್ ಮೂಡ್‌ಗೆ ಬರಲಿದ್ದಾರೆ.

ಕಂದಾಯ ಇಲಾಖೆ ಪ್ರಧಾನ ಕಾರ್ಯದರ್ಶಿ ಡಾ.ರಾಜ್‌ಕುಮಾರ್ ಖತ್ರಿ ಹೇಳಿಕೆ

# ಮೇನಲ್ಲಿ ಉಡುಪಿಗೆ ಎನ್‌ಡಿಆರ್‌ಎಫ್ ತಂಡ

• ದಿಗಂತ ವರದಿ, ಮಣಿಪಾಲ

ಮುಂಬರುವ ಮಳೆಗಾಲದಲ್ಲಿ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಯಾವುದೇ ರೀತಿಯ ಅತಿವೃಷ್ಟಿ ಮತ್ತು ಪ್ರಕೃತಿ ವಿಕೋಪವನ್ನು ಸಮರ್ಪಕವಾಗಿ ನಿರ್ವಹಿಸುವ ದೃಷ್ಟಿಯಿಂದ ರಾಷ್ಟ್ರೀಯ ವಿಪತ್ತು ಪರಿಹಾರ ತಂಡದ (ಎನ್‌ಡಿಆರ್ ಎಫ್) ಒಂದು ಬೆಟಾಲಿಯನ್ ಮೇ ತಿಂಗಳ ಅಂತ್ಯಕ್ಕೆ ಇಲ್ಲಿಗೆ ಆಗಮಿಸಲಿದೆ ಎಂದು ರಾಜ್ಯ ಸರಕಾರದ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ ಡಾ.ರಾಜ್‌ಕುಮಾರ್ ಖತ್ರಿ ತಿಳಿಸಿದ್ದಾರೆ.

ಅವರು ಸೋಮವಾರ ಉಡುಪಿ ಜಿಲ್ಲಾಧಿಕಾರಿ ಅವರ ಕಚೇರಿ ಸಭಾಂಗಣದಲ್ಲಿ ನಡೆದ ರಾಜ್ಯದ ಕರಾವಳಿಯ ಮೂರು ಜಿಲ್ಲೆಗಳ ವಿಪತ್ತು ನಿರ್ವಹಣೆ ಕಾರ್ಯಕ್ರಮಗಳ ಮತ್ತು ಕುಡಿಯುವ ನೀರಿನ ಸಮಸ್ಯೆ ನಿರ್ವಹಣೆ ಕುರಿತು ಸಭೆಯಲ್ಲಿ ಮಾತನಾಡಿದರು.

ಎನ್‌ಡಿಆರ್‌ಎಫ್ ದಕ್ಷಿಣ ವಲಯದ ಕಚೇರಿ ಆಂಧ್ರಪ್ರದೇಶದ ಗುಂಟೂರಿನಲ್ಲಿದೆ. ಇದರಿಂದ ತುರ್ತು ಸಂದರ್ಭದಲ್ಲಿ ಎನ್‌ಡಿಆರ್ ಎಫ್ ತಂಡವು ಅತಿವೃಷ್ಟಿ ಪೀಡಿತ ಪ್ರದೇಶಗಳಿಗೆ ಕ್ಷಿಪ್ರವಾಗಿ ತಲುಪಲು ವಿಳಂಬವಾಗುತ್ತಿದೆ. ಕಳೆದ ವರ್ಷ ಉಭಯ ಜಿಲ್ಲೆಗಳಲ್ಲಿ ತೀವ್ರ ಅತಿವೃಷ್ಟಿ ಸಂಭವಿಸಿರುವ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಪ್ರಕೃತಿ ವಿಕೋಪದ ಸಂದರ್ಭಗಳಲ್ಲಿ ನೆರವಾಗಲು ಎನ್‌ಡಿಆರ್‌ಎಫ್‌ನ ಒಂದು ತಂಡವನ್ನು ನಿಯೋಜಿಸಲು ರಾಜ್ಯ ಸರಕಾರ ಅನುಮೋದನೆ ನೀಡಿದೆ ಎಂದು ಅವರು ತಿಳಿಸಿದರು. ಎರಡೂ ಜಿಲ್ಲೆಗಳಿಗೆ ಅನುಕೂಲವಾಗುವಂತೆ ಎನ್‌ಡಿಆರ್‌ಎಫ್ ತಂಡವನ್ನು ಸುರತ್ಕಲ್‌ನಲ್ಲಿ ಮೊಕ್ಕಾಂ ಇರಿಸಲಾಗುವುದು ಎಂದವರು ಹೇಳಿದರು.

ಇದೇ ಸಂದರ್ಭದಲ್ಲಿ ವಿಪತ್ತು ನಿರ್ವಹಣೆ ಯೋಜನೆಗಳ ವಿವರ ನೀಡಿದ ರಾಷ್ಟ್ರೀಯ ವಿಪತ್ತು ನಿರ್ವಹಣಾ ಯೋಜನೆಯ ಯೋಜನಾ ನಿರ್ದೇಶಕ ರಾಜ್‌ಕುಮಾರ್ ಪೂಜಾರಿ, ವಿಪತ್ತುಗಳ ತುರ್ತು ಸಂದರ್ಭಗಳಿಗೆ ಬಳಕೆಯಾಗಲು ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲ ಒಂಭತ್ತುಕೆರೆ ಎಂಬಲ್ಲಿ ಸುಮಾರು 270 ಲಕ್ಷ ವೆಚ್ಚದಲ್ಲಿ ವಿವಿಧೋದ್ದೇಶ ವಿಪತ್ತು ತಂಗುದಾಣ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದೆ. ಇದು ಕಾಲಾ ಕಟ್ಟಡವಾಗಿದ್ದು, ತುರ್ತು ಸಂದರ್ಭಗಳಿಗೆ ವಿಪತ್ತು ಕಾರ್ಯಗಳಿಗೆ ಬಳಸಲಾಗುವುದು. ಇದರೊಂದಿಗೆ ಸುರತ್ಕಲ್ ಹೊಸಬೆಟ್ಟು ಸಮೀಪದ ಸುಮಾರು 380ಲಕ್ಷ ರೂ. ವೆಚ್ಚದಲ್ಲಿ ಇದೇ ಉದ್ದೇಶಕ್ಕಾಗಿ ಸಮುದಾಯ ಭವನ ನಿರ್ಮಾಣವಾಗುತ್ತಿದೆ ಎಂದು ಮಾಹಿತಿ ನೀಡಿದರು.

ಈ ಕಟ್ಟಡಗಳನ್ನು ವಿಪತ್ತು ಸಂದರ್ಭಗಳಲ್ಲಿ ಹಾಗೂ ಉಳಿದ ಸಮಯದಲ್ಲಿ ಇತರ ಸದುದ್ದೇಶಿತ ಕಾರ್ಯಗಳಿಗೆ ಬಳಕೆಯಾಗುವಂತೆ ನೋಡಿಕೊಳ್ಳಲು ಕಂದಾಯ ಪ್ರಧಾನ ಕಾರ್ಯದರ್ಶಿ ಅವರು ಸೂಚಿಸಿದರು. ಇದೇ ಸಂದರ್ಭದಲ್ಲಿ ಅವರು ಜಿಲ್ಲೆಯಲ್ಲಿ ಕುಡಿಯುವ ನೀರಿನ ಪೂರೈಕೆಯ ಪ್ರಗತಿ ಪರಿಶೀಲಿಸಿದರು.

ಜಿಲ್ಲಾಧಿಕಾರಿ ಹೆಪ್ಸಿಬಾ ರಾಣಿ ಕೊರ್ಲಪಾಟಿ ಅವರು ಕುಡಿಯುವ ನೀರಿನ ಪೂರೈಕೆಯ ಕುರಿತು ಮಾಹಿತಿ ನೀಡಿದರು. ಸಭೆಯಲ್ಲಿ ಅಪರ ಜಿಲ್ಲಾಧಿಕಾರಿ ವಿದ್ಯಾಕುಮಾರಿ, ಉಡುಪಿ, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಅಧಿಕಾರಿಗಳು ಉಪಸ್ಥಿತರಿದ್ದರು.

> ಉಡುಪಿ ಜಿಲ್ಲೆಯಲ್ಲಿ ಹೊಸದಾಗಿ ರಚಿಸಲಾಗಿರುವ ಬೈಂದೂರು, ಬ್ರಹ್ಮಾವರ, ಕಾಪು ಮತ್ತು ಹೆಬ್ರಿ, ಈ ನಾಲ್ಕು ಹೊಸ ತಾಲೂಕುಗಳಿಗೆ ಮೂಲಸೌಕರ್ಯ ವ್ಯವಸ್ಥೆಗಳನ್ನು ಒದಗಿಸಿಕೊಡಲು ಶೀಘ್ರದಲ್ಲೇ ಸರಕಾರದ ಕಂದಾಯ ಇಲಾಖೆಯಿಂದ ಮಂಜೂರಾತಿ ನೀಡಲಾಗುವುದು.
> ■ ಡಾ. ರಾಜ್ ಕುಮಾರ್ ಖತ್ರಿ, ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ

> ಉಡುಪಿ ಜಿಲ್ಲೆಯಲ್ಲಿ ಪ್ರಸಕ್ತ ಒಂದೇ ಉಪವಿಭಾಗ ಇದ್ದು, ಏಳು ತಾಲೂಕುಗಳು ಇರುವುದರಿಂದ ಆಡಳಿತಾತ್ಮಕವಾಗಿ ಎರಡು ಉಪವಿಭಾಗ ರಚನೆ ಮಾಡುವುದು ಅಗತ್ಯವಿದೆ. ಅದೇ ರೀತಿ ನೂತನ ಹೋಬಳಿಗಳನ್ನು ಸೃಷ್ಟಿಸಬೇಕಾದ ಅನಿವಾರ್ಯತೆ ಇದೆ. ಜಿಲ್ಲೆಯಲ್ಲಿ ಹೊಸದಾಗಿ 4 ತಾಲೂಕುಗಳು ಸ್ಥಾಪನೆಯಾಗಿದ್ದು ಇಲ್ಲಿ ಆಡಳಿತ ಮೂಲಸೌಕರ್ಯಗಳನ್ನು ಒದಗಿಸಬೇಕಾಗಿದೆ.
> ■ ಹೆಪ್ಸಿಬಾ ರಾಣಿ ಕೊರ್ಲಪಾಟಿ, ಉಡುಪಿ ಜಿಲ್ಲಾಧಿಕಾರಿ

## ಕಿರು ಸುದ್ದಿ

### ಮಾಜಿ ಸಿಎಂ ಪುತ್ರರ ನಡುವೆ ನೇರ ಹಣಾಹಣಿ

**ಶಿವಮೊಗ್ಗ:** ರಾಜಕೀಯದ ತಂತ್ರ-ಪ್ರತಿತಂತ್ರಗಳಿಗೆ ಕಾರಣವಾಗಿರುವ ಮಲೆನಾಡಿನ ಲೋಕಸಭಾ ಕ್ಷೇತ್ರದ ಭವಿಷ್ಯವನ್ನು ಮತದಾರ ಇಂದು ಬರೆಯಲಿದ್ದಾನೆ.

ಇಂದು ಬೆಳಗ್ಗೆ 7 ರಿಂದ ಸಂಜೆ 6ರವರೆಗೆ ಮತದಾನ ನಡೆಯಲಿದೆ. ಇವರಲ್ಲಿ ಇಬ್ಬರು ಮಾಜಿ ಮುಖ್ಯಮಂತ್ರಿಗಳ ಪುತ್ರರ ಭವಿಷ್ಯ ಅಡಕವಾಗಲಿದೆ. ಬಿ.ವೈ. ರಾಘವೇಂದ್ರ ಮತ್ತು ಮಧು ಬಂಗಾರಪ್ಪ ಆರು ತಿಂಗಳ ಹಿಂದಷ್ಟೇ ಲೋಕಸಭಾ ಉಪಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಇದರಲ್ಲಿ ಬಿ.ವೈ. ರಾಘವೇಂದ್ರ 52 ಸಾವಿರ ಮತಗಳ ಅಂತರದಿಂದ ಗೆಲುವು ಸಾಧಿಸಿದ್ದರು. ಬಂಗಾರಪ್ಪ ಮತ್ತು ಯಡಿಯೂರಪ್ಪ ಕುಟುಂಬದ ನಡುವಿನ 5ನೇ ಚುನಾವಣಾ ಸಮರ ಇದಾಗಿದೆ.

ರಾಜ್ಯದಲ್ಲಿ ಮೊದಲ ಹಂತದಲ್ಲಿ 14 ಲೋಕಸಭಾ ಕ್ಷೇತ್ರಗಳಲ್ಲಿ ಲೋಕಸಭಾ ಚುನಾವಣೆ ನಿಗದಿಯಾಗಿತ್ತು. ಈ ವೇಳೆ ಶಿವಮೊಗ್ಗ ಲೋಕಸಭಾ ಕ್ಷೇತ್ರದ ಕಡೆಗೆ ಮೈತ್ರಿಕೂಟ ಅಷ್ಟಾಗಿ ಗಮನಹರಿಸಿರಲಿಲ್ಲ. ಕೇವಲ ಮಂಡ್ಯ ಲೋಕಸಭಾ ಕ್ಷೇತ್ರಕ್ಕಷ್ಟೇ ಚುನಾವಣೆ ಸೀಮಿತವಾಗಿದೆ ಎಂಬ ಆರೋಪವೂ ಕೇಳಿಬಂದಿತ್ತು.

ಎರಡನೇ ಹಂತದ ಲೋಕಸಭಾ ಕ್ಷೇತ್ರಗಳಿಗೆ ನಡೆಯುವ ಚುನಾವಣೆಯಲ್ಲಿ ಕಾಂಗ್ರೆಸ್-ಜೆಡಿಎಸ್ ಮೈತ್ರಿಕೂಟ ಶಿವಮೊಗ್ಗ ಲೋಕಸಭಾ ಕ್ಷೇತ್ರಕ್ಕೆ ಅತಿ ಹೆಚ್ಚಿನ ಮನ್ನಣೆ ನೀಡಿತು. ಇದರಿಂದಾಗಿ ಶಿವಮೊಗ್ಗ ಲೋಕಸಭಾ ಕ್ಷೇತ್ರ ಕಡೇ ಗಳಿಗೆಯಲ್ಲಿ ರಂಗು ಪಡೆದುಕೊಂಡಿತು. ಅದರಲ್ಲೂ ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಹಾಗೂ ಜಲಸಂಪನ್ಮೂಲ ಸಚಿವ ಡಿ.ಕೆ. ಶಿವಕುಮಾರ್ ಶಿವಮೊಗ್ಗ ಲೋಕಸಭಾ ಕ್ಷೇತ್ರದಲ್ಲಿ ಶತಾಯ ಗತಾಯ ಗೆಲ್ಲಬೇಕೆಂದು ಇಲ್ಲಿಯೇ ಎರಡು ದಿನ ತಂಗಿ ತಂತ್ರಗಾರಿಕೆ ರೂಪಿಸಿದ್ದರು.

ಇದನ್ನು ಅರಿತ ಬಿಜೆಪಿ ಪ್ರಮುಖರು ಕೂಡ ಪ್ರತಿತಂತ್ರ ರೂಪಿಸಿದರು. ಅದರ ಫಲವಾಗಿ ಬಿಜೆಪಿ ರಾಷ್ಟ್ರಾಧ್ಯಕ್ಷ ಅಮಿತ್ ಶಾ ಭದ್ರಾವತಿಯಲ್ಲಿ ರೋಡ್ ಶೋ ನಡೆಸಿ ಮತದಾರರನ್ನು ಸೆಳೆಯಲು ಯತ್ನಿಸಿದರು. ಸ್ವತಃ ಯಡಿಯೂರಪ್ಪ ಕೂಡ ಕ್ಷೇತ್ರದಾದ್ಯಂತ ಸಂಚರಿಸಿ ಪುತ್ರನ ಪರವಾಗಿ ಮತಯಾಚಿಸಿದ್ದರು.

# ಗಂಗಾಪೂಜೆ ಕುರಿತು ವಿಶೇಷ ಜನಜಾಗೃತಿ

**ಮಡಿಕೇರಿ:** ಮಡಿಕೇರಿಯ ತಿರಿಬೊಳ್‌ಚ ಕೊಡವ ಸಂಘಟನೆಯ ವತಿಯಿಂದ ಪೊನ್ನಂಪೇಟೆ ಕೊಡವ ಸಮಾಜದಲ್ಲಿ ಇತ್ತೀಚೆಗೆ 'ಕೊಡವ ಮಂಗಲತ್ ನೀರ್ ಎಡ್‌ಪಲ್ಲಿ ಮೂಡಿನ ತರ್‌ತಿತ್ ಅಡುಪೊ' (ಗಂಗಾಪೂಜೆ) ವಿಚಾರದ ಕುರಿತು ವಿಶೇಷ ಜನಜಾಗೃತಿ ಕಾರ್ಯಕ್ರಮ ಹಾಗೂ ವಿಚಾರಗೋಷ್ಠಿ ನಡೆಯಿತು.

ಕಾರ್ಯಕ್ರಮದಲ್ಲಿ ಮೂಲ ಸಂಸ್ಕೃತಿಯ ಬದಲಾವಣೆಯಿಂದ ಆಗುತ್ತಿರುವ ವ್ಯತಿರಿಕ್ತ ಪರಿಣಾಮ, ಮದುವೆ ಸಂದರ್ಭದಲ್ಲಿ ಮದ್ಯ ಬಳಕೆ ಹೆಚ್ಚಾಗುತ್ತಿರುವುದು, ಮತ್ತಿತರ ಅಂಶಗಳ ಬಗ್ಗೆ ಪ್ರಮುಖರು ಆತಂಕ ವ್ಯಕ್ತಪಡಿಸಿ ಮೂಲ ಪದ್ಧತಿಗೆ ಧಕ್ಕೆಯಾಗಬಾರದು. ಈ ನಿಟ್ಟಿನಲ್ಲಿ ಜಾಗೃತಿ ಮೂಡಿಸುವುದರ ಮೂಲಕ ಸುಧಾರಣೆ ತರುವುದು ಅಗತ್ಯವಾಗಿದೆ ಎಂಬ ಅಭಿಪ್ರಾಯ ವ್ಯಕ್ತಗೊಂಡಿತು.

ತಿರಿಬೊಳ್‌ಚ ಸಂಘದ ಅಧ್ಯಕ್ಷೆ ಹಾಗೂ ಕೊಡವ ಅಕಾಡೆಮಿಯ ಮಾಜಿ ಅಧ್ಯಕ್ಷೆ ಉಳ್ಳಿಯಡ ಡಾಟಿ ಪೂವಯ್ಯ ಅವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮ ನಡೆಯಿತು.

ಕೊಡವ ಮದುವೆ ಪದ್ಧತಿಯಲ್ಲಿ ಗಂಗಾಪೂಜೆ ಪದ್ಧತಿ ಹಲವು ದಶಕದಿಂದ ಬದಲಾವಣೆಗೊಂಡಿದ್ದು, ಇದು ಮೂಲ ಪದ್ಧತಿಗೆ ವಿರುದ್ಧವಾಗಿದೆ. ಕೆಲವರು ತಮ್ಮ ಅನುಕೂಲಕ್ಕಾಗಿ ಬದಲಾವಣೆ ಮಾಡಿಕೊಂಡ ಪದ್ಧತಿಯೇ ಈಗಲೂ ನಡೆಯುತ್ತಿದ್ದು, ಇದರ ಬಗ್ಗೆ ಜನಾಂಗದಲ್ಲಿ ಅರಿವು ಮೂಡಿಸಿ ಸುಧಾರಣೆ ತರುವುದು ಅಗತ್ಯವಾಗಿದೆ ಎಂದು ಕೊಡವ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷ ಉಳ್ಳಿಯಡ ಪೂವಯ್ಯ ಅವರು ಅಭಿಪ್ರಾಯಪಟ್ಟರು.

ಪೊನ್ನಂಪೇಟೆ ಕೊಡವ ಸಮಾಜದ ಅಧ್ಯಕ್ಷ ಚೊಟ್ಟೆಕ್‌ಮಾಡ ರಾಜೀವ್ ಬೋಪಯ್ಯ ಅವರು ಮಾತನಾಡಿ, ಕೊಡವ ಸಮುದಾಯದ ಮದುವೆಯಲ್ಲಿ ಗಂಗಾಪೂಜೆ ಸಂದರ್ಭ ವಧುವನ್ನು ಕರೆದು ಕುಣಿಯುವ ಹಕ್ಕು ವಧುವಿನ ಮೈದುನ ಮತ್ತು ವರನ ಚಿಕ್ಕಪ್ಪ ಹಾಗೂ ದೊಡ್ಡಪ್ಪನ ಮಕ್ಕಳಿಗೆ ಮಾತ್ರ ಇರುತ್ತದೆ. ಆದರೆ, ಇತ್ತೀಚಿನ ವರ್ಷಗಳಲ್ಲಿ ಯಾವುದೇ ಸಂಬಂಧ ಇಲ್ಲದವರು ಸಹ ಸಮಯ ಮಿತಿ ಇಲ್ಲದೆ ಕುಣಿಯುವುದು ಕಂಡು ಬರುತ್ತಿದ್ದು, ಇದು ವಧುವಿಗೆ ನೀಡುವ ಕಿರುಕುಳವಾಗಿದೆ ಎಂದು ಅಸಮಾಧಾನ ವ್ಯಕ್ತಪಡಿಸಿದರು.

ಕೊಡವ ಸಂಸ್ಕೃತಿಗೆ ಕಳಂಕ ತರುತ್ತಿರುವ ಇಂತಹ ಆಚರಣೆಗಳ ಬಗ್ಗೆ ಕೊಡವ ಸಮಾಜ ಹಾಗೂ ಸಮಾಜದ ಮುಖಂಡರು ಕಾರ್ಯ ಪ್ರವೃತ್ತರಾಗಬೇಕು ಎಂದು ಅವರು ಹೇಳಿದರು.

ತಿರಿಬೊಳ್‌ಚ ಕೊಡವ ಸಂಘದ ಸ್ಥಾಪಕ ಅಧ್ಯಕ್ಷೆ ಉಳ್ಳಿಯಡ ಡಾಟಿ ಪೂವಯ್ಯ ಕೊಡವ ಸಂಸ್ಕೃತಿಯ ವಿಶೇಷತೆಯ ಭಾಗವಾದ ಮದುವೆಯಲ್ಲಿ ಪದ್ಧತಿ ಆಚಾರ-ವಿಚಾರಗಳು ಮೂಲ ಸಂಸ್ಕೃತಿಗೆ ಧಕ್ಕೆ ತರುತ್ತಿದ್ದು, ಇವುಗಳ ಬಗ್ಗೆ ಜಾಗೃತಿ ಮೂಡಿಸಿ ಸುಧಾರಣೆ ತರುವುದು ಅಗತ್ಯವಾಗಿದೆ ಎಂದು ಅಭಿಪ್ರಾಯಪಟ್ಟರು. ಅಲ್ಲದೆ ಮೂಲ ಸಂಸ್ಕೃತಿಯ ಮಹತ್ವ ಹಾಗೂ ಈ ಬಗ್ಗೆ ಸುಧಾರಣೆ ಮಾಡಲು ಜಾಗೃತಿ ಮೂಡಿಸಲು ಸಂಘದಿಂದ ಕಾರ್ಯಕ್ರಮ ಹಮ್ಮಿಕೊಳ್ಳಲಾಗುತ್ತಿದೆ ಎಂದು ಹೇಳಿದರು.

ಈ ಸಂದರ್ಭ ವಿಚಾರ ಮಂಡಿಸಿದ ಉಪನ್ಯಾಸಕಿ ಚೋಕಿರ ಅನಿತಾ ದೇವಯ್ಯ ಅವರು ನೀರ್ ಎಡ್‌ಪೊ ಸಂದರ್ಭದಲ್ಲಿ ಆಗುತ್ತಿರುವ ಬದಲಾವಣೆ ಹಾಗೂ ಮೂಲ ಪದ್ಧತಿಯ ಮಹತ್ವದ ಕುರಿತು ಬೆಳಕು ಚೆಲ್ಲಿದರು.

ವೇದಿಕೆಯಲ್ಲಿ ಮುಖ್ಯ ಅತಿಥಿಯಾಗಿ ಅಕಾಡೆಮಿ ಸದಸ್ಯೆ ಹಂಚೆಟ್ಟಿರ ಫ್ಯಾನ್ಸಿ ಮುತ್ತಣ್ಣ, ಬೆಂಗಳೂರು ಕೊಡವ ಸಮಾಜದ ಮಾಜಿ ಕಾರ್ಯದರ್ಶಿ ಕುಕ್ಕೇರ ಜಯ ಚಿಣ್ಣಪ್ಪ, ಚೋಕಿರ ಅನಿತಾ ದೇವಯ್ಯ ಹಾಜರಿದ್ದರು. ರಾಜೀವ್ ಬೋಪಯ್ಯ ಸ್ವಾಗತಿಸಿ, ಕೊಪ್ಪಿರ ಜೂನ ವಿಜಯ್ ಮತ್ತು ಬೊಟ್ಟೋಳಂಡ ನಿವ್ಯಾ ದೇವಯ್ಯ ಪ್ರಾರ್ಥಿಸಿ, ವಂದಿಸಿದರು.

# ಮಾನವನ ದುರಾಸೆಗೆ ಬರಡಾದ ಭೂಮಿ

**ಆನೇಕಲ್:** ಮಾನವನ ದುರಾಸೆಯಿಂದ ಭೂಮಿ ಬರಡಾಗುತ್ತಿದೆ. ಮುಂದಿನ ಪೀಳಿಗೆ ಭವಿಷ್ಯದ ದೃಷ್ಟಿಯಿಂದ ಮನುಷ್ಯ ಎಚ್ಚೆತ್ತುಕೊಳ್ಳಬೇಕು. ಆ ಮೂಲಕ ಪರಿಸರ ಉಳಿವಿಗೆ ಎಲ್ಲರು ಶ್ರಮಿಸಬೇಕು ಎಂದು ಆನೇಕಲ್ ಸಿವಿಲ್ ನ್ಯಾಯಾಲಯದ ನ್ಯಾಯಾಧೀಶರಾದ ಚಿದಾನಂದ್ ಬಡಿಗೇರ ಸಲಹೆ ನೀಡಿದರು.

ತಾಲೂಕಿನ ಸೂರ್ಯಸಿಟಿಯಲ್ಲಿ ವಿಶ್ವ ಭೂ ದಿನದ ಅಂಗವಾಗಿ ಆನೇಕಲ್ ನ್ಯಾಯಾಧೀಶರು, ಪೊಲೀಸ್ ಮತ್ತು ಅರಣ್ಯ ಇಲಾಖೆ ವತಿಯಿಂದ ಸೋಮವಾರ ಅರಿವು ಕಾರ್ಯಕ್ರಮದಲ್ಲಿ ಸಸಿ ನೆಡುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಸ್ಥಳೀಯ ನಿವಾಸಿಗಳು ಮತ್ತು ಮಕ್ಕಳಿಗೆ ಪರಿಸರದ ಬಗ್ಗೆ ಅರಿವು ಮೂಡಿಸಿ ನಂತರ ಮಾತನಾಡಿದ ಅವರು, ಪರಿಸರ ಕಾಳಜಿ ಕೇವಲ ದಿನಕ್ಕೆ ಸೀಮಿತವಾಗದೆ ಪ್ರತಿದಿನವೂ ಗಿಡ ನೆಟ್ಟು ಪರಿಸರ ಉಳಿಸಿ ಬೆಳೆಸಬೇಕಿದೆ. ಅಲ್ಲದೆ ಎಲ್ಲಾ ಕಡೆಗಳಲ್ಲೂ ಪ್ಲಾಸ್ಟಿಕ್ ಬಳಕೆ ಕಡ್ಡಾಯವಾಗಿ ನಿಷೇಧಿಸುವ ನಿಟ್ಟಿನಲ್ಲಿ ಸ್ಥಳೀಯ ಆಡಳಿತಗಳು ಎಚ್ಚರ ವಹಿಸುವ ಜೊತೆಗೆ ಪರಿಸರ ಸಂರಕ್ಷಣೆಗೆ ಆದ್ಯತೆ ನೀಡಬೇಕೆಂದು ತಿಳಿಸಿದರು.

ಮೂರನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಾದ ಎಂ.ದೇವರಾಜ್ ಭಟ್ ಮಾತನಾಡಿ, ಪರಿಸರ ರಕ್ಷಣೆ ಆಗದೇ ಇದ್ದರೆ ಮುಂದೆ ಆಪತ್ತು ಬರಲಿದೆ, ಮನೆಗೊಂದರಂತೆ ಗಿಡ ಮರವಿದ್ದಾಗ ಮಾತ್ರ ಉತ್ತಮ ಗಾಳಿ ಸಿಗಲಿದೆ, ನಾವು ಹುಟ್ಟುಹಬ್ಬಗಳ ಸಂದರ್ಭದಲ್ಲಿ ಗಿಡಗಳನ್ನು ನೆಟ್ಟು ಆಚರಣೆ ಮಾಡಿದಾಗ ಮುಂದೆ ಮರವಾಗಿ ನಮಗೆ ರಕ್ಷಣೆ ಆಗುತ್ತದೆ ಎಂದರು.

ಸೂರ್ಯನಗರದಲ್ಲಿ ಆನೇಕಲ್ ನ್ಯಾಯಾಧೀಶರು ಸಸಿ ನೆಡುವ ಮೂಲಕ ವಿಶ್ವ ಭೂ ದಿನ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಸ್ಥಳೀಯ ವಿದ್ಯಾರ್ಥಿ ಟೀನಾ ವಾಸವಿ ಮಾತನಾಡಿ, ಪರಿಸರ ಕಾಳಜಿ ಕೇವಲ ದಿನಕ್ಕೆ ಸೀಮಿತವಾಗದೆ ಪ್ರತಿದಿನವೂ ಗಿಡ ನೆಟ್ಟು ಪರಿಸರ ಉಳಿಸಿ ಬೆಳೆಸಬೇಕಿದೆ, ನನ್ನ ಹುಟ್ಟು ದಿನದಂದು ಬರುವವರಿಗೆ ಒಂದೊಂದು ಗಿಡವನ್ನು ನೀಡುತ್ತಿದ್ದೇನೆ, ಎಲ್ಲರೂ ಇದೇ ರೀತಿ ಜನ್ಮ ದಿನವನ್ನು ಆಚರಣೆ ಮಾಡಿದರೆ, ಮುಂದೆ ಭೂಮಿ ನಮ್ಮ ರಕ್ಷಣೆಗೆ ನಿಲ್ಲಲು ಸಹಕಾರಿಯಾಗಲಿದೆ ಎಂದರು.

ಕಾರ್ಯಕ್ರಮದಲ್ಲಿ ಸಿವಿಲ್ ನ್ಯಾಯಾಧೀಶರಾದ ಟಿ.ಸಿ.ಶ್ರೀಕಾಂತ್, ಕೆ.ಗೋಕುಲ, ವಕೀಲರ ಸಂಘದ ಕಾರ್ಯದರ್ಶಿ ಸಿ.ವಿಜಯ ಕುಮಾರ್, ಸಂಘದ ಪದಾಧಿಕಾರಿ ಕೆ.ವಿ.ರವಿ, ಸೂರ್ಯನಗರ ವೃತ್ತ ನಿರೀಕ್ಷಕ ವಿಕ್ಟರ್ ಸೈಮನ್, ಆನೇಕಲ್ ಅರಣ್ಯ ಇಲಾಖೆಯ ಮುಖ್ಯಾಧಿಕಾರಿ ರಂಗಸ್ವಾಮಿ, ವಕೀಲ ಎ.ಜಿ.ರಾಜು ಮತ್ತಿತರರು ಇದ್ದರು.



# ವಿದ್ಯುದಾಘಾತ ಸಂಭವಿಸುವ ಮುನ್ಸೂಚನೆ ಕಂಡುಬಂದಲ್ಲಿ ತಕ್ಷಣ ದೂರು ನೀಡಿ: ಸೆಸ್ಕ್

**ಮಡಿಕೇರಿ:** ಜಿಲ್ಲೆಯಾದ್ಯಂತ ವಿದ್ಯುತ್ ವಿತರಣೆಗೆ ನಿರ್ಮಿಸಿರುವ ಮಾರ್ಗಗಳ ಬಹುಭಾಗ ತೋಟಗಳಲ್ಲಿನ ಮರಗಿಡಗಳ ಮಧ್ಯದಲ್ಲಿ ಹಾದು ಹೋಗಿದ್ದು, ಮರಗಳ ರೆಂಬೆ ಕೊಂಬೆಗಳ ಬೆಳವಣಿಗೆಯಿಂದಾಗಿ ಕಂಬಗಳು ಬಾಗಿ, ತಂತಿಗಳು ಕೆಳಮಟ್ಟದಲ್ಲಿದ್ದು ಇದರಿಂದಾಗಿ ವಿದ್ಯುದಾಘಾತಗಳಾಗುವ ಸಂಭವವಿರುತ್ತದೆ. ಆದ್ದರಿಂದ, ಅಪಾಯ ಮಟ್ಟದಲ್ಲಿರುವ ವಿದ್ಯುತ್ ತಂತಿಗಳು, ಶಿಥಿಲಗೊಂಡಿರುವ ಕಂಬಗಳು ಕಂಡು ಬಂದರೆ ಆಯಾ ವ್ಯಾಪ್ತಿಗೆ ಸಂಬಂಧಿಸಿದ ಅಧಿಕಾರಿಗಳಿಗೆ ಸಾರ್ವಜನಿಕರು ದೂರು ನೀಡುವಂತೆ ಮಡಿಕೇರಿ ವಿಭಾಗದ ಸೆಸ್ಕ್ ಕಾರ್ಯನಿರ್ವಾಹಕ ಎಂಜಿನಿಯರ್ ಅವರು ಕೋರಿದ್ದಾರೆ

ಹಾಗೆಯೇ ತೋಟಗಳಲ್ಲಿ ಕರಿ ಮೆಣಸು ಕೀಳಲು ಮತ್ತು ಮರದ ಕೊಂಬೆಗಳನ್ನು ಕಡಿಯಲು ಅಲ್ಯೂಮಿನಿಯಂ ಏಣಿಗಳನ್ನು ಮತ್ತು ನೀರು ಹಾಯಿಸಲು ಅಲ್ಯೂಮಿನಿಯಂ ಸ್ಪ್ರಿಂಕ್ಲರ್ ಪೈಪ್‌ಗಳನ್ನು ಉಪಯೋಗಿಸುತ್ತಿದ್ದು, ಇವುಗಳು ವಿದ್ಯುತ್ ಮಾರ್ಗಕ್ಕೆ ತಾಗಿ ಆಗಿಂದಾಗ್ಗೆ ವಿದ್ಯುತ್ ಅಪಘಾತಗಳು ಸಂಭವಿಸುತ್ತಿವೆ. ಆದ್ದರಿಂದ ಅಲ್ಯೂಮಿನಿಯಂ, ಕಬ್ಬಿಣದ ಏಣಿ ಬದಲು ಬಿದಿರು, ಫೈಬರ್ ಏಣಿಗಳನ್ನೇ ಉಪಯೋಗಿಸಿ ವಿದ್ಯುತ್ ಅಪಘಾತಗಳನ್ನು ತಡೆಗಟ್ಟಲು ಇಲಾಖೆಯೊಂದಿಗೆ ಸಹಕರಿಸುವಂತೆ ಅವರು ಸಾರ್ವಜನಿಕರಲ್ಲಿ ಮನವಿ ಮಾಡಿದ್ದಾರೆ.

### ಏ.25: ದುರಸ್ತಿ ಕಾರ್ಯ: ವಿದ್ಯುತ್ ಸ್ಥಗಿತ

ಮಡಿಕೇರಿ: ವಿದ್ಯುತ್ ವಿತರಣಾ ಕೇಂದ್ರ ಮತ್ತು ಮಾರ್ಗದಲ್ಲಿ ತುರ್ತು ನಿರ್ವಹಣೆ ಹಾಗೂ ದುರಸ್ತಿ ಕಾರ್ಯ ನಿರ್ವಹಿಸಬೇಕಿರುವುದರಿಂದ ಏ. 25 ರಂದು ಬೆಳಗ್ಗೆ 10 ಗಂಟೆಯಿಂದ ಸಂಜೆ 6 ಗಂಟೆಯವರೆಗೆ ಪೊನ್ನಂಪೇಟೆ, ವೀರಾಜಪೇಟೆ, ಶ್ರೀಮಂಗಲ, ಸಿದ್ದಾಪುರ ಹಾಗೂ ಮೂರ್ನಾಡು ವಿದ್ಯುತ್ ಉಪ ಕೇಂದ್ರಗಳಲ್ಲಿ ವಿದ್ಯುತ್ ಸರಬರಾಜು ಸ್ಥಗಿತಗೊಳಿಸಲಾಗುವುದು.

ಆದ್ದರಿಂದ ಪೊನ್ನಂಪೇಟೆ, ಗೋಣಿಕೊಪ್ಪಲು, ನಲ್ಲೂರು, ಹುದಿಕೇರಿ, ತಿತಿಮತಿ, ಹಾತೂರು, ಪಾಲಿಬೆಟ್ಟ, ಶ್ರೀಮಂಗಲ, ಬಾಳೆಲೆ, ಕಾನೂರು, ಬಿರುನಾಣಿ, ಕುಟ್ಟ, ವೀರಾಜಪೇಟೆ, ಬಿ.ಶೆಟ್ಟಿಗೇರಿ, ಬೇತ್ರಿ, ಕದನೂರು, ಕಾಕೋಟುಪರಂಬು, ಅಮ್ಮತ್ತಿ, ಸಿದ್ದಾಪುರ, ಮಾಲ್ದಾರೆ, ಮೂರ್ನಾಡು, ಮರಗೋಡು, ನಾಪೋಕ್ಲು, ಕಕ್ಕಬೆ, ಆರೆಕಾಡು, ಅಮ್ಮಂಗೇರಿ ಹಾಗೂ ಸುತ್ತಮುತ್ತಲ ವ್ಯಾಪ್ತಿಯ ಪ್ರದೇಶಗಳಲ್ಲಿ ವಿದ್ಯುತ್ ಸರಬರಾಜಿನಲ್ಲಿ ವ್ಯತ್ಯಯವಾಗಲಿದೆ ಎಂದು ಮಡಿಕೇರಿ ವಿಭಾಗದ ಸೆಸ್ಕ್ ಕಾರ್ಯನಿರ್ವಾಹಕ ಎಂಜಿನಿಯರ್ ಸೋಮಶೇಖರ ಅವರು ತಿಳಿಸಿದ್ದಾರೆ.

# ಪುನರ್ ಪ್ರತಿಷ್ಠಾಪನಾ ವಾರ್ಷಿಕೋತ್ಸವ

**ಮಡಿಕೇರಿ:** ನಗರದ ನಾಲ್ಕು ಶಕ್ತಿ ದೇವತೆಗಳಲ್ಲೊಂದಾದ ಶ್ರೀ ಕಂಚಿ ಕಾಮಾಕ್ಷಿಯಮ್ಮ ದೇವಾಲಯದ 12ನೇ ವರ್ಷದ ಪುನರ್ ಪ್ರತಿಷ್ಠಾಪನಾ ವಾರ್ಷಿಕೋತ್ಸವ ಮತ್ತು ಕುಂಭಾಭಿಷೇಕ ಶ್ರದ್ಧಾ ಭಕ್ತಿಯಿಂದ ಜರುಗಿತು. ಕೇರಳದ ಪಯ್ಯನೂರಿನ ಶ್ರೀ ಈಶ್ವರ ನಂಬೂದರಿ ಅವರ ನೇತೃತ್ವದಲ್ಲಿ ಮೂರು ದಿನಗಳ ಕಾಲ ಧಾರ್ಮಿಕ ಕಾರ್ಯಕ್ರಮಗಳು ನಡೆದವು.

ಪಶುದಾನ ಪುಣ್ಯಾಹ, ವಿಷ್ಣು ಪೂಜೆ, ಭಗವತಿ ಸೇವೆ, ಸುದರ್ಶನ ಹೋಮ, ವಾಸ್ತು ಬಲಿ ಪೂಜೆ, ಗಣಪತಿ ಹೋಮ, ತಿಲ ಹೋಮ, ಮಹಾ ಮೃತ್ಯುಂಜಯ ಹೋಮ, ಬಿಂಬ ಶುದ್ಧಿ, ಕಳಶಗಳಿಗೆ ವಿಶೇಷ ಪೂಜೆಗಳು ನೆರವೇರಿದವು.

ಭಾನುವಾರ ಸಂಜೆ ಕೇರಳದ ಸಾಂಪ್ರದಾಯಿಕ ಚೆಂಡೆವಾದ್ಯ, ಸಿಂಗಾರಿ ಮೇಳ, ತೆಯ್ಯಂ ಕಥಕಳಿ ಕುಣಿತ, ನವಿಲು ಕುಣಿತ ಹಾಗೂ ಕೊಡಗಿನ ವೈವಿಧ್ಯಮಯ ಕಲಾ ತಂಡಗಳೊಂದಿಗೆ ನಗರದ ಮುಖ್ಯ ಬೀದಿಯಲ್ಲಿ ಕಳಶಗಳ ಭವ್ಯ ಮೆರವಣಿಗೆ ನಡೆಯಿತು. ವಾರ್ಷಿಕೋತ್ಸವದ ಕೊನೆಯ ದಿನವಾದ ಸೋಮವಾರ ನಡೆದ ಗಣಪತಿ ಹೋಮ, ಬ್ರಹ್ಮಕಲಶ ಪೂಜೆ, ಕಲಶಾಭಿಷೇಕ, ಮಹಾ ಕುಂಭಾಭಿಷೇಕ ಮತ್ತು ಮಹಾಪೂಜೆಗೆ ಸಾಕ್ಷಿಯಾದ ಸಾವಿರಾರು ಭಕ್ತರಿಗೆ ಅನ್ನಸಂತರ್ಪಣೆ ನಡೆಸಲಾಯಿತು. ದೇವಿಗೆ ಆಭರಣ ಸಮರ್ಪಣೆ: ಐತಿಹಾಸಿಕ ಮಡಿಕೇರಿ ದಸರಾ ಮಂಟಪಗಳ ಶೋಭಾಯಾತ್ರೆಯಲ್ಲಿ ಜನರ ಮೆಚ್ಚುಗೆಗೆ ಪಾತ್ರವಾಗಿ ಹಲವಾರು ವರ್ಷಗಳು ಬಹುಮಾನವಾಗಿ ಪಡೆದಿರುವ ಚಿನ್ನದ ನಾಣ್ಯಗಳಲ್ಲಿ ಅಂದಾಜು 10 ಪವನ್ ಹೊಂದಿರುವ ಚಿನ್ನದ ತಾಳಿ ಸರಗಳನ್ನು ತಯಾರಿಸಿ ಕಂಚಿ ಕಾಮಾಕ್ಷಿಯಮ್ಮ ಹಾಗೂ ಮುತ್ತು ಮಾರಿಯಮ್ಮ ದೇವಿಗೆ ಬಾಲಕ ಮಂಡಳಿ ವತಿಯಿಂದ ಸಮರ್ಪಿಸಲಾಯಿತು.

ದೇವಾಲಯ ಆಡಳಿತ ಮಂಡಳಿಯ ಅಧ್ಯಕ್ಷ ಪಿ.ಎ.ಲೋಕನಾಥ್, ಉಪಾಧ್ಯಕ್ಷ ಜೆ.ಎ.ರವಿಕುಮಾರ್, ಕೋಶಾಧಿಕಾರಿ ರಮೇಶ್, ಗೌರವ ಅಧ್ಯಕ್ಷ ಜೆ.ಎ.ಚಾಮಿ, ಉಪಾಧ್ಯಕ್ಷ ಜೆ.ಪಿ.ಶ್ರೀನಿವಾಸ್ ಮತ್ತಿತರ

# ಗಂಗಾಪೂಜೆ ಸಂದರ್ಭ ಮದ್ಯ ನಿಷೇಧಕ್ಕೆ ವ್ಯಾಪಕ ಬೆಂಬಲ

**ಮಡಿಕೇರಿ:** ಮಡಿಕೇರಿಯ ತಿರಿಬೊಳ್‌ಚ ಕೊಡವ ಸಂಘಟನೆಯ ವತಿಯಿಂದ ಪೊನ್ನಂಪೇಟೆ ಕೊಡವ ಸಮಾಜದಲ್ಲಿ ಇತ್ತೀಚೆಗೆ 'ಕೊಡವ ಮಂಗಲತ್ ನೀರ್ ಎಡ್‌ಪಲ್ಲಿ ಮೂಡಿನ ತರ್‌ತಿತ್ ಅಡುಪೊ' (ಗಂಗಾಪೂಜೆ) ವಿಚಾರದ ಕುರಿತು ವಿಶೇಷ ಜನಜಾಗೃತಿ ಕಾರ್ಯಕ್ರಮ ಹಾಗೂ ವಿಚಾರಗೋಷ್ಠಿ ನಡೆಯಿತು.

ಕಾರ್ಯಕ್ರಮದಲ್ಲಿ ಮೂಲ ಸಂಸ್ಕೃತಿಯ ಬದಲಾವಣೆಯಿಂದ ಆಗುತ್ತಿರುವ ವ್ಯತಿರಿಕ್ತ ಪರಿಣಾಮ, ಮದುವೆ ಸಂದರ್ಭದಲ್ಲಿ ಮದ್ಯ ಬಳಕೆ ಹೆಚ್ಚಾಗುತ್ತಿರುವುದು, ಮತ್ತಿತರ ಅಂಶಗಳ ಬಗ್ಗೆ ಪ್ರಮುಖರು ಆತಂಕ ವ್ಯಕ್ತಪಡಿಸಿ ಮೂಲ ಪದ್ಧತಿಗೆ ಧಕ್ಕೆಯಾಗಬಾರದು. ಈ ನಿಟ್ಟಿನಲ್ಲಿ ಜಾಗೃತಿ ಮೂಡಿಸುವುದರ ಮೂಲಕ ಸುಧಾರಣೆ ತರುವುದು ಅಗತ್ಯವಾಗಿದೆ ಎಂಬ ಅಭಿಪ್ರಾಯ ವ್ಯಕ್ತಗೊಂಡಿತು.

ತಿರಿಬೊಳ್‌ಚ ಸಂಘದ ಅಧ್ಯಕ್ಷೆ ಹಾಗೂ ಕೊಡವ ಅಕಾಡೆಮಿಯ ಮಾಜಿ ಅಧ್ಯಕ್ಷೆ ಉಳ್ಳಿಯಡ ಡಾಟಿ ಪೂವಯ್ಯ ಅವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮ ನಡೆಯಿತು.

ಕೊಡವ ಮದುವೆ ಪದ್ಧತಿಯಲ್ಲಿ ಗಂಗಾಪೂಜೆ ಪದ್ಧತಿ ಹಲವು ದಶಕದಿಂದ ಬದಲಾವಣೆಗೊಂಡಿದ್ದು, ಇದು ಮೂಲ ಪದ್ಧತಿಗೆ ವಿರುದ್ಧವಾಗಿದೆ. ಕೆಲವರು ತಮ್ಮ ಅನುಕೂಲಕ್ಕಾಗಿ ಬದಲಾವಣೆ ಮಾಡಿಕೊಂಡ ಪದ್ಧತಿಯೇ ಈಗಲೂ ನಡೆಯುತ್ತಿದ್ದು, ಇದರ ಬಗ್ಗೆ ಜನಾಂಗದಲ್ಲಿ ಅರಿವು ಮೂಡಿಸಿ ಸುಧಾರಣೆ ತರುವುದು ಅಗತ್ಯವಾಗಿದೆ ಎಂದು ಕೊಡವ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷ ಉಳ್ಳಿಯಡ ಪೂವಯ್ಯ ಅವರು ಅಭಿಪ್ರಾಯಪಟ್ಟರು.

ಪೊನ್ನಂಪೇಟೆ ಕೊಡವ ಸಮಾಜದ ಅಧ್ಯಕ್ಷ ಚೊಟ್ಟೆಕ್‌ಮಾಡ ರಾಜೀವ್ ಬೋಪಯ್ಯ ಅವರು ಮಾತನಾಡಿ, ಕೊಡವ ಸಮುದಾಯದ ಮದುವೆಯಲ್ಲಿ ಗಂಗಾಪೂಜೆ ಸಂದರ್ಭ ವಧುವನ್ನು ಕರೆದು ಕುಣಿಯುವ ಹಕ್ಕು ವಧುವಿನ ಮೈದುನ ಮತ್ತು ವರನ ಚಿಕ್ಕಪ್ಪ ಹಾಗೂ ದೊಡ್ಡಪ್ಪನ ಮಕ್ಕಳಿಗೆ ಮಾತ್ರ ಇರುತ್ತದೆ. ಆದರೆ, ಇತ್ತೀಚಿನ ವರ್ಷಗಳಲ್ಲಿ ಯಾವುದೇ ಸಂಬಂಧ ಇಲ್ಲದವರು ಸಹ ಸಮಯ ಮಿತಿ ಇಲ್ಲದೆ ಕುಣಿಯುವುದು ಕಂಡು ಬರುತ್ತಿದ್ದು, ಇದು ವಧುವಿಗೆ ನೀಡುವ ಕಿರುಕುಳವಾಗಿದೆ ಎಂದು ಅಸಮಾಧಾನ ವ್ಯಕ್ತಪಡಿಸಿದರು. ಕೊಡವ ಸಂಸ್ಕೃತಿಗೆ ಕಳಂಕ ತರುತ್ತಿರುವ ಇಂತಹ ಆಚರಣೆಗಳ ಬಗ್ಗೆ ಕೊಡವ ಸಮಾಜ ಹಾಗೂ ಸಮಾಜದ ಮುಖಂಡರು ಕಾರ್ಯ ಪ್ರವೃತ್ತರಾಗಬೇಕು ಎಂದು ಅವರು ಹೇಳಿದರು.

ತಿರಿಬೊಳ್‌ಚ ಕೊಡವ ಸಂಘದ ಸ್ಥಾಪಕ ಅಧ್ಯಕ್ಷೆ ಉಳ್ಳಿಯಡ ಡಾಟಿ ಪೂವಯ್ಯ ಕೊಡವ ಸಂಸ್ಕೃತಿಯ ವಿಶೇಷತೆಯ ಭಾಗವಾದ ಮದುವೆಯಲ್ಲಿ ಪದ್ಧತಿ ಆಚಾರ-ವಿಚಾರಗಳು ಮೂಲ ಸಂಸ್ಕೃತಿಗೆ ಧಕ್ಕೆ ತರುತ್ತಿದ್ದು, ಇವುಗಳ ಬಗ್ಗೆ ಜಾಗೃತಿ ಮೂಡಿಸಿ ಸುಧಾರಣೆ ತರುವುದು ಅಗತ್ಯವಾಗಿದೆ ಎಂದು ಅಭಿಪ್ರಾಯಪಟ್ಟರು. ಅಲ್ಲದೆ ಮೂಲ ಸಂಸ್ಕೃತಿಯ ಮಹತ್ವ ಹಾಗೂ ಈ ಬಗ್ಗೆ ಸುಧಾರಣೆ ಮಾಡಲು ಜಾಗೃತಿ ಮೂಡಿಸಲು ಸಂಘದಿಂದ ಕಾರ್ಯಕ್ರಮ ಹಮ್ಮಿಕೊಳ್ಳಲಾಗುತ್ತಿದೆ ಎಂದು ಹೇಳಿದರು.

ಈ ಸಂದರ್ಭ ವಿಚಾರ ಮಂಡಿಸಿದ ಉಪನ್ಯಾಸಕಿ ಚೋಕಿರ ಅನಿತಾ ದೇವಯ್ಯ ಅವರು ನೀರ್ ಎಡ್‌ಪೊ ಸಂದರ್ಭದಲ್ಲಿ ಆಗುತ್ತಿರುವ ಬದಲಾವಣೆ ಹಾಗೂ ಮೂಲ ಪದ್ಧತಿಯ ಮಹತ್ವದ ಕುರಿತು ಬೆಳಕು ಚೆಲ್ಲಿದರು.

ವೇದಿಕೆಯಲ್ಲಿ ಮುಖ್ಯ ಅತಿಥಿಯಾಗಿ ಅಕಾಡೆಮಿ ಸದಸ್ಯೆ ಹಂಚೆಟ್ಟಿರ ಫ್ಯಾನ್ಸಿ ಮುತ್ತಣ್ಣ, ಬೆಂಗಳೂರು ಕೊಡವ ಸಮಾಜದ ಮಾಜಿ ಕಾರ್ಯದರ್ಶಿ ಕುಕ್ಕೇರ ಜಯ ಚಿಣ್ಣಪ್ಪ, ಚೋಕಿರ ಅನಿತಾ ದೇವಯ್ಯ ಹಾಜರಿದ್ದರು. ರಾಜೀವ್ ಬೋಪಯ್ಯ ಸ್ವಾಗತಿಸಿ, ಕೊಪ್ಪಿರ ಜೂನ ವಿಜಯ್ ಮತ್ತು ಬೊಟ್ಟೋಳಂಡ ನಿವ್ಯಾ ದೇವಯ್ಯ ಪ್ರಾರ್ಥಿಸಿ, ವಂದಿಸಿದರು.

ಕೊಡವ ಮದುವೆ ಇತರ ಸಮಾರಂಭಗಳಲ್ಲಿ ಮದ್ಯ ಬಳಕೆಯಿಂದ ಆರ್ಥಿಕವಾಗಿ ನಷ್ಟವಾಗುತ್ತಿದ್ದು, ಇದು ಜನಾಂಗದ ಹಿತಾಸಕ್ತಿಗೆ ಧಕ್ಕೆ ಉಂಟು ಮಾಡುತ್ತಿದೆ. ಇದರೊಂದಿಗೆ ಉಳ್ಳವರು, ಇಲ್ಲದವರ ನಡುವೆ ಪ್ರತಿಷ್ಠೆಯಾಗಿ ಪರಿಣಮಿಸಿದೆ. ಗಂಗಾಪೂಜೆ ಸಂದರ್ಭ ಸಮಯದ ಮಿತಿ ಇಲ್ಲದೇ ಸಮಾರಂಭ ನಡೆಯುವಂತಾಗಿ ಕೊಡವ ಜನಾಂಗದ ವಿಶಿಷ್ಟ ಸಂಸ್ಕೃತಿಗೆ ಕಳಂಕ ತರುತ್ತಿದೆ. ಆದ್ದರಿಂದ ಮದ್ಯ ಬಳಕೆಯನ್ನು ಮದುವೆ ಸಮಾರಂಭದಲ್ಲಿ ನಿರ್ಬಂಧಿಸಿ, ದುಂದು ವೆಚ್ಚಕ್ಕೆ ಕಡಿವಾಣ ಹಾಕಿ, ಸರಳವಾಗಿ ಆಚರಿಸುವ ನಿಟ್ಟಿನಲ್ಲಿ ಜನಾಂಗದವರು ಗಂಭೀರವಾಗಿ ಚಿಂತಿಸುವ ಬಗ್ಗೆ ಕಾರ್ಯಾಗಾರದಲ್ಲಿ ವ್ಯಾಪಕ ಅಭಿಪ್ರಾಯ ವ್ಯಕ್ತವಾಯಿತು.

ಉಪನ್ಯಾಸಕ ಚೊಟ್ಟೆಯಂಡಮಾಡ ವಿಶ್ವನಾಥ್ ಅವರು ಮಾತನಾಡಿ, ಕೊಡವ ಮದುವೆಯಲ್ಲಿ ಗಂಗಾಪೂಜೆ ಸಂದರ್ಭ ಮದ್ಯ ಬಳಕೆ ನಿರ್ಬಂಧಿಸಿರುವ ಅಮ್ಮತ್ತಿ ಕೊಡವ ಸಮಾಜದ ಕ್ರಮ ಸ್ವಾಗತಾರ್ಹವಾಗಿದೆ ಎಂದರು.

ಮಡಿಕೇರಿಯಲ್ಲಿ ಉಚಿತ ಬೇಸಿಗೆ ಶಿಬಿರದ ಉದ್ಘಾಟನಾ ಸಮಾರಂಭ | 15 ದಿನದ ಶಿಬಿರದಲ್ಲಿ ವಿವಿಧ ಚಟುವಟಿಕೆಗಳು

# ಶಿಬಿರದಿಂದ ಒಳ್ಳೆಯ ವಿಚಾರಗಳನ್ನು ಗ್ರಹಿಸಿ

**ಮಡಿಕೇರಿ:** ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್, ರಾಜ್ಯ ಬಾಲ ಭವನ ಸೊಸೈಟಿ, ಜಿಲ್ಲಾ ಬಾಲಭವನ ಸಮಿತಿ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸಹಯೋಗದಲ್ಲಿ 9 ರಿಂದ 16 ವರ್ಷದ ಮಕ್ಕಳಿಗೆ ಮೇ 6 ರವರೆಗೆ ನಡೆಯಲಿರುವ ಉಚಿತ ಬೇಸಿಗೆ ಶಿಬಿರದ ಉದ್ಘಾಟನಾ ಸಮಾರಂಭ ಸೋಮವಾರ ನಗರದ ಸ್ತ್ರೀಶಕ್ತಿ ಭವನದಲ್ಲಿ ನಡೆಯಿತು.

ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿ ಹಿರಿಯ ಸಿವಿಲ್ ನ್ಯಾಯಾಧೀಶೆ ನೂರುನ್ನೀಸಾ ಅವರು ಶಿಬಿರವನ್ನು ಉದ್ಘಾಟಿಸಿ ಈಗಿನ ಕಾಲದಲ್ಲಿ ಮಕ್ಕಳು ಅಜ್ಜಿ ಮನೆಗೆ ಹೋಗುವ ಪರಿಪಾಠ ತುಂಬಾ ವಿರಳ. ಮಕ್ಕಳು ಅಪ್ಪ, ಅಮ್ಮನ ಜೊತೆ ಬೆಳೆಯುತ್ತಾರೆ, ಅಪ್ಪ ಅಮ್ಮ ಮತ್ತು ಮಕ್ಕಳು ಇವಿಷ್ಟೇ ಕುಟುಂಬವಾಗಿ ಬಿಟ್ಟಿದೆ. ಆದುದರಿಂದ ಮಕ್ಕಳನ್ನು ಬೇರೆ ಕಡೆ ಕಳುಹಿಸಲು ಹೆದರುತ್ತಾರೆ. ಮನೆಯಲ್ಲಿದ್ದರೂ ಸಹ ಮಕ್ಕಳಿಗೆ ಉತ್ತಮ ವಾತಾವರಣ ಇರುವುದಿಲ್ಲ, ಟಿ.ವಿ., ಮೊಬೈಲ್‌ಗಳಲ್ಲಿಂದೇ ಆಟವಾಡುತ್ತಿದ್ದು, ಯಾಂತ್ರಿಕ ಬದುಕು ನಡೆಸುತ್ತಿರುತ್ತಾರೆ. ಕೂಡು ಕುಟುಂಬಗಳು ಕಾಣಸಿಗುವುದೇ ಅಪರೂಪ. ಅದಕ್ಕಾಗಿ ಪೋಷಕರು ಇಂತಹ ಬೇಸಿಗೆ ಶಿಬಿರಗಳಿಗೆ ಮಕ್ಕಳನ್ನು ಕಳುಹಿಸಬೇಕು ಎಂದು ಹೇಳಿದರು.

ಪೋಷಕರು ಮಕ್ಕಳಿಗೆ ಮಣ್ಣನ್ನು ಮುಟ್ಟಬಾರದು, ಮಣ್ಣಿನಲ್ಲಿ ಆಟವಾಡಬಾರದು ಎನ್ನುತ್ತಾರೆ. ಆದರೆ ಮಣ್ಣು ಪ್ರಕೃತಿ ದತ್ತವಾದದ್ದು, ಮಣ್ಣಿನಲ್ಲಿ ಅನೇಕ ವಿಧದ ಪೋಷಕಾಂಶಗಳಿವೆ. ಮಣ್ಣಿನಲ್ಲಿ ಆಟಗಳನ್ನು ಮಾಡಬಹುದು ಎಂದು ತಿಳಿಸಿದರು. ಅದರಂತೆ ಯಕ್ಷಗಾನ ಕಲೆಯನ್ನು ಹೊಗಳುತ್ತಾ, ಬೇಸಿಗೆ ಶಿಬಿರದಲ್ಲಿ ಯಕ್ಷಗಾನ ಕಲೆಯನ್ನು ಹೇಳಿಕೊಡುವುದು ಒಳ್ಳೆಯ ಉದ್ದೇಶ. ಈ ಕಲೆಯನ್ನು ಮಕ್ಕಳೆಲ್ಲರೂ ಕಲಿತುಕೊಳ್ಳಿ ಎಂದು ತಿಳಿಸಿದರು.

ಈ ಬೇಸಿಗೆ ಶಿಬಿರ 15 ದಿನಗಳ ಕಾಲ ನಡೆಯಲಿದ್ದು, ಎಲ್ಲರೂ ಬೆರೆತು ಒಬ್ಬರನ್ನೊಬ್ಬರು ಅರಿತು ಉತ್ತಮ ವಾತಾವರಣದಲ್ಲಿ ಹಲವು ವಿಚಾರಗಳನ್ನು ಕಲಿತುಕೊಳ್ಳುವುದರೊಂದಿಗೆ ಇಲ್ಲಿ ಸೇರಿರುವ ಮಕ್ಕಳಲ್ಲಿ ಬೇರೆ ಬೇರೆ ಗುಣಗಳನ್ನು ಹೊಂದಿದ ಮಕ್ಕಳಿದ್ದು, ಒಳ್ಳೆಯ ಗುಣಗಳನ್ನು ವಿನಿಮಯ ಮಾಡಿಕೊಂಡು ಈ ಶಿಬಿರದ ಸದುಪಯೋಗ ಪಡೆದುಕೊಂಡು, ಸಮಾಜಕ್ಕೆ ನಡೆಸಿ ಎಂದು ಹಿತವಚನ ನುಡಿದರು.

ಜಿ.ಪಂ.ಸಿಇಒ ಕೆ. ಲಕ್ಷ್ಮಿಪ್ರಿಯಾ ಅವರು ಮಾತನಾಡಿ 15 ದಿನದ ಬೇಸಿಗೆ ಶಿಬಿರದಲ್ಲಿ ಮಧ್ಯಾಹ್ನದವರೆಗೆ ಯೋಗ, ಸಮೂಹ ನೃತ್ಯ, ಸಂಗೀತ, ಯಕ್ಷಗಾನ, ಚಿತ್ರಕಲೆ, ಕರಕುಶಲ, ಜೇಡಿ ಮಣ್ಣಿನ ಕಲೆ, ಕಸದಿಂದ ರಸ, ಜ್ಯುವೆಲ್ಲರಿ ಮೇಕಿಂಗ್ ಮತ್ತಿತರ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಅಪ್ಪುಗಳಲ್ಲಿ ಪ್ರಕೃತಿ ವಿಕೋಪದಿಂದ ಉಂಟಾಗುವ ಅನಾಹುತಕ್ಕೆ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳಲು ಯುನಿಸೆಫ್ ಸಂಸ್ಥೆಯಿಂದ ತರಬೇತಿ, ಬೆಂಕಿ ಅನಾಹುತವುಂಟಾದಾಗ ಮುನ್ನೆಚ್ಚರಿಕೆ ಕ್ರಮ, ಅನಿರೀಕ್ಷಿತ ಅಪಘಾತವಾದಾಗ ಪ್ರಥಮ ಚಿಕಿತ್ಸೆಯನ್ನು ಮಕ್ಕಳೇ ಮಾಡುವ ಬಗ್ಗೆ ತರಬೇತಿ, ಟ್ರಾಫಿಕ್ ನಿಯಮದ ಬಗ್ಗೆ ಅರಿವು ಕಾರ್ಯಕ್ರಮ, ಆಯುರ್ವೇದ ವೈದ್ಯ ಪದ್ಧತಿಗಳ ಬಗ್ಗೆ ಮಾಹಿತಿ, ಗಾಳಿಪಟ ಉತ್ಸವ, ಹೊರಾಂಗಣ ಆಟ, ಹೊರ ಸಂಚಾರ, ಸ್ವಚ್ಛ ಭಾರತ ಕಾರ್ಯಕ್ರಮ, ಶ್ರಮದಾನ, ಕನ್ನಡ ಪದಸಂಪತ್ತು, ಪವಾಡ ಬಯಲು ಬಗ್ಗೆ ಮಾಹಿತಿ, ಪೋಕ್ಸೋ ಕಾಯ್ದೆ ಬಗ್ಗೆ ಮಾಹಿತಿ, ಮಕ್ಕಳ ಚಲನಚಿತ್ರ ಪ್ರದರ್ಶನ ಮುಂತಾದವುಗಳಿದ್ದು, ಇದರ ಪ್ರಯೋಜನವನ್ನು ಮಕ್ಕಳು ಹಾಗೂ ಮಕ್ಕಳ ಪೋಷಕರು ಪಡೆದುಕೊಳ್ಳುವಂತೆ ತಿಳಿಸಿದರು.

ಆಯುಷ್ ಇಲಾಖೆಯ ವೈದ್ಯಾಧಿಕಾರಿ ಡಾ.ರಾಮಚಂದ್ರ, ಅವರು ಆಯುರ್ವೇದ ವೈದ್ಯ ಪದ್ಧತಿಯ ಬಗ್ಗೆ ಮಕ್ಕಳಿಗೆ ಮಾಹಿತಿ ನೀಡಿದರು.

ನೀನಾಸಂ ತಂಡದವರಾದ ನವೀನ ಹಾಗೂ ಚೇತನ್ ಅವರು 15 ದಿನಗಳ ಕಾಲ ನಡೆಯುವ ಬೇಸಿಗೆ ಶಿಬಿರದಲ್ಲಿ ಮಕ್ಕಳಿಗೆ ವಿವಿಧ ಚಟುವಟಿಕೆಗಳನ್ನು ಕಲಿಸಿಕೊಡಲಿದ್ದಾರೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಉಪ ನಿರ್ದೇಶಕಿ ಟಿ.ಎಸ್. ಅರುಂಧತಿ ಸ್ವಾಗತಿಸಿದರೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಿಬ್ಬಂದಿಗಳಾದ ಸತ್ಯಭಾಮ ಕೆ.ವಿ.ಅವರು ನಿರೂಪಿಸಿ ಜಯಂತಿ ಪಿ.ಕೆ. ವಂದಿಸಿದರು.

# ಗ್ರಾಮಸ್ಥರಿಂದ ಕಲ್ಯಾಣಿ ಸ್ವಚ್ಛತೆ

**ಚನ್ನಪಟ್ಟಣ:** ತಾಲೂಕಿನ ಬ್ರಹ್ಮಣೀಪುರ ಗ್ರಾಮದ ಆವರಣದಲ್ಲಿರುವ ಪುರಾತನ ಕಾಲದ ಬ್ರಹ್ಮಣ್ಯತೀರ್ಥರ ಕಲ್ಯಾಣಿಯನ್ನು ಗ್ರಾಮಸ್ಥರು ಸೇರಿ ಸ್ವಚ್ಛಗೊಳಿಸಿದರು.

ಪುರಾತನ ಕಾಲದ ಕಲ್ಯಾಣಿಯಲ್ಲಿ ಬೆಳೆದು ನಿಂತಿದ್ದ ಗಿಡಗಂಟಿಗಳನ್ನು ಸ್ವಚ್ಛಗೊಳಿಸುವ ಮೂಲಕ ಪಾರಂಪರಿಕ ಕಲ್ಯಾಣಿಗೆ ಗ್ರಾಮಸ್ಥರು ಹೊಸ ಮೆರಗು ನೀಡಿದರು. ಕಳೆದ ವರ್ಷ ಪಟ್ಟಣದ ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಎನ್‌ಎಸ್‌ಎಸ್ ವಿದ್ಯಾರ್ಥಿಗಳು ಗಿಡ್ಡ ಗಂಟಿಗಳು ಬೆಳೆದು ಮುಚ್ಚಿಹೋಗುವ ಹಂತ ದಲ್ಲಿದ್ದ ಈ ಕಲ್ಯಾಣಿಯನ್ನು ಸ್ವಚ್ಛಗೊಳಿಸುವ ಮೂಲಕ ಗ್ರಾಮಸ್ಥರಿಗೆ ಜಾಗೃತಿ ಮೂಡಿಸಿದ್ದರು. ಆದಾದ ನಂತರವೂ ಗಿಡಗಂಟಿ ಬೆಳೆದಿದ್ದರಿಂದ ಗ್ರಾಮಸ್ಥರಾದ ಕೇಬಲ್ ಶ್ರೀನಿವಾಸ್, ಉಪನ್ಯಾಸಕ ಲೋಕೇಶ್, ಕೆಂಗಲ್ಲೇಗೌಡ, ಕೆಂಪರಾಜು, ಚಿಕ್ಕೋನು, ಶಿವರಾಜು, ರಾಜು, ಗೋವಿಂದೇಗೌಡ ಅವರ ನೇತೃತ್ವದಲ್ಲಿ ಶುಚಿಗೊಳಿಸಲಾಯಿತು.

ಗ್ರಾಮದಲ್ಲಿರುವ ಐತಿಹಾಸಿಕ ಸ್ಮಾರಕಗಳು, ಕಲ್ಯಾಣಿಗಳನ್ನು ಪುನರುಜ್ಜೀವನಗೊಳಿಸಿ ಮುಂದಿನ ಪೀಳಿಗೆಗೆ ಅವುಗಳನ್ನು ಪರಿಚಯಿಸಿ ಸಬೇಕೆನ್ನುವುದು ಇದರ ಉದ್ದೇಶವಾಗಿದೆ ಎಂದು ಸಂದರ್ಭದಲ್ಲಿ ಗ್ರಾಮಸ್ಥರು ಪ್ರತಿಕ್ರಿಯಿಸಿದರು.

ಚನ್ನಪಟ್ಟಣ ತಾಲೂಕಿನ ಬ್ರಹ್ಮಣೀಪುರ ಗ್ರಾಮದಲ್ಲಿರುವ ಬ್ರಹ್ಮಣ್ಯತೀರ್ಥರ ಕಲ್ಯಾಣಿಯನ್ನು ಗ್ರಾಮಸ್ಥರು ಸ್ವಚ್ಛಗೊಳಿಸಿದರು.

# ನಿರ್ಣಯ ಅನುಷ್ಠಾನ: ಸಂತಸ

ಅಮ್ಮತ್ತಿ: ಕೊಡವ ಜನಾಂಗದ ಮದುವೆಯಲ್ಲಿ 'ನೀರ್ ಎಡ್‌ಪೊ' (ಗಂಗಾಪೂಜೆ) ಸಂದರ್ಭದಲ್ಲಿ ಮದ್ಯ ಸರಬರಾಜು ಮಾಡುವುದನ್ನು ನಿಷೇಧಿಸಿ ಅಮ್ಮತ್ತಿ ಕೊಡವ ಸಮಾಜ ನಿರ್ಣಯ ಕೈಗೊಂಡಿರುವುದನ್ನು ಅನುಷ್ಠಾನಕ್ಕೆ ತರಲಾಗಿದೆ.

ಇತ್ತೀಚೆಗೆ ಅಮ್ಮತ್ತಿ ಕೊಡವ ಸಮಾಜದ ಮಹಾಸಭೆಯಲ್ಲಿ ಐತಿಹಾಸಿಕವಾದ ಈ ತೀರ್ಮಾನವನ್ನು ಕೈಗೊಳ್ಳಲಾಗಿತ್ತು.

ಮಹಾಸಭೆಯ ಬಳಿಕ ಹೊಸ್ಸ ಮಾಸವಿದ್ದುದರಿಂದ ಸಮಾರಂಭಗಳು ಇರಲಿಲ್ಲ. ಇದೀಗ ಹೊಸ್ಸ ಮಾಸ ಕಳೆದ ಬಳಿಕ ನಿಗದಿಯಾಗಿರುವ ಮದುವೆಗಳು ನಡೆಯುತ್ತಿದ್ದು, ಸಮಾಜದ ತೀರ್ಮಾನಕ್ಕೆ ಬದ್ಧರಾಗಿ ಬಹುತೇಕ ಕುಟುಂಬದವರು ನಡೆದುಕೊಳ್ಳುತ್ತಿದ್ದಾರೆ. ಕೆಲವು ದಿನದ ಹಿಂದೆ ಅಣ್ಣಾಳಮಾಡ ಹಾಗೂ ಮಾಚಿಮಾಡ ಕುಟುಂಬದ ವಿವಾಹ ಸಮಾರಂಭ ಇದೇ ರೀತಿಯಲ್ಲಿ ಜರುಗಿದೆ. ಏ.20 ಹಾಗೂ 21 ರಂದು ಕಾಣತಂಡ ಹಾಗೂ ಕೊರವಂಡ ಕುಟುಂಬದ ವಿವಾಹವಿದ್ದು, ಈ ಸಮಾರಂಭದಲ್ಲೂ ಇದು ಯಶಸ್ವಿಯಾಗಿ ಕಾರ್ಯರೂಪಕ್ಕೆ ಬಂದಿದೆ.

ಗಂಗಾಪೂಜೆ ಶಾಸ್ತ್ರ ಮುಗಿದ ಬಳಿಕ ಮದ್ಯ ಬಳಕೆಗೆ ಸಮಾಜ ಕಡಿವಾಣ ಹಾಕಿಲ್ಲ. ಈ ತೀರ್ಮಾನದ ಬಗ್ಗೆ ಜನವಲಯದಲ್ಲಿ ಉತ್ತಮ ರೀತಿಯ ಪ್ರತಿಕ್ರಿಯೆ ವ್ಯಕ್ತಗೊಳ್ಳುತ್ತಿದೆ. ಅಲ್ಲದೆ ಇದು ಎಲ್ಲಾ ಕಡೆಗಳಲ್ಲಿಯೂ ಸಕಾರಾತ್ಮಕವಾದ ಚರ್ಚೆಗೆ, ಜಾಗೃತಿಗೆ ಕಾರಣವಾಗಿದ್ದು, ಇತರೆಡೆಗಳಲ್ಲಿಯೂ ಅನುಷ್ಠಾನಗೊಳ್ಳುವ ಬೆಳವಣಿಗೆಗಳು ಕಂಡು ಬರುತ್ತಿರುವುದಾಗಿ ಸಮಾಜದ ಅಧ್ಯಕ್ಷ ಮೂಕೊಂಡ ಬೋಸ್ ದೇವಯ್ಯ ಅವರು ಸಂತಸ ವ್ಯಕ್ತಪಡಿಸಿದ್ದಾರೆ. ಸಮಾರಂಭಕ್ಕೆ ಮುಂಚಿತ ಕಾಯ್ದಿರಿಸುವವರಿಗೆ ಸಮಾಜದ ತೀರ್ಮಾನವನ್ನು ಪತ್ರದ ಮುಖೇನ ತಿಳಿಸಲಾಗುತ್ತಿದೆ ಎಂದು ಬೋಸ್ ದೇವಯ್ಯ ವಿವರಿಸಿದ್ದಾರೆ.

ಅಂಕನಳ್ಳಿ ಶ್ರೀ ಗುರುಸಿದ್ಧ ವೀರೇಶ್ವರ ಸ್ವಾಮಿ ದೇಗುಲದ ಜಾತ್ರಾ ಮಹೋತ್ಸವ

# ಎಂಟನೇ ವರ್ಷದ ಬ್ರಹ್ಮರಥೋತ್ಸವ

**ಸೋಮವಾರಪೇಟೆ:** ತಾಲೂಕಿನ ಅಂಕನಳ್ಳಿ ಸಮೀಪದ ಮನೆ ಹಳ್ಳಿ ಗ್ರಾಮದಲ್ಲಿರುವ ಶ್ರೀ ಗುರುಸಿದ್ಧ ವೀರೇಶ್ವರ ಸ್ವಾಮಿಯ ತಪೋವನದಲ್ಲಿ ಸ್ವಾಮಿಯ ತಪೋವನದಲ್ಲಿ ಸ್ವಾಮಿಯ ಎಂಟನೇ ವರ್ಷದ ಬ್ರಹ್ಮ ರಥೋತ್ಸವವು ಅತ್ಯಂತ ಶ್ರದ್ಧಾಭಕ್ತಿಯಿಂದ ನೆರವೇರಿತು. ಅಮೂಲಿಕ ತಪೋವನ ಕ್ಷೇತ್ರದಲ್ಲಿ 3 ದಿನಗಳಿಂದ ನಡೆಯುತ್ತಿರುವ ಶ್ರೀಗುರು ಸಿದ್ಧವೀರೇಶ್ವರ ಸ್ವಾಮಿ ಜಾತ್ರಾ ಮಹೋತ್ಸವಕ್ಕೆ ಭಾನುವಾರ ಸಂಜೆ ಮಹಾ ರಥೋತ್ಸವದೊಂದಿಗೆ ತೆರೆ ಬಿದ್ದಿತು.

ಬೆಳಗ್ಗೆ ವೀರಭದ್ರೇಶ್ವರ ಸ್ವಾಮಿಯವರ ಪ್ರೀತ್ಯರ್ಥ ದುಗ್ಗಳ ಹಾಗೂ ಅಗ್ನಿ ಕೊಂಡೋತ್ಸವ ಸೇವೆ ಸ್ವಾಮಿಯವರ ಸಣ್ಣ ಚಂದ್ರ ಮಂಡಲೋತ್ಸವ ಹಾಗೂ ಸ್ವಾಮಿಯವರ ಅಡ್ಡಪಲ್ಲಕ್ಕಿ ಉತ್ಸವ ನೆರವೇರಿತು. ಶ್ರೀಪ್ರಸನ್ನ ತಪೋವನೇಶ್ವರ ದೇವಾಲಯದಲ್ಲಿ ಅಮ್ಮನವರ ಪ್ರೀತ್ಯರ್ಥ ಮತ್ತೆ ಉದ ಸೇವೆ ನಡೆಯಿತು ನಂತರ ಸುಮಂಗಲಿಯರಿಗೆ ಮಡಿಲು ತುಂಬುವ ಕಾರ್ಯಕ್ರಮ ನಡೆಯಿತು. ಸಂಜೆ ಪೂಜಾ ವಿಧಿ ವಿಧಾನಗಳೊಂದಿಗೆ ಸ್ವಾಮಿಯ ವಿಗ್ರಹವನ್ನು ಪಲ್ಲಕ್ಕಿಯಲ್ಲಿರಿಸಿ, ಮಂಗಳವಾದ್ಯ ಘೋಷಗಳೊಂದಿಗೆ 108 ಕಳಸ ಹೊತ್ತ ಸುಮಂಗಲಿಯರು ಹಾಗೂ ನೂರಾರು ಭಕ್ತರು ನೂತನ ದೇವಾಲಯದ ಸುತ್ತಲು ಮೂರು ಬಾರಿ ಪ್ರದಕ್ಷಿಣೆ ನಂತರ ರಥದಲ್ಲಿ ಪ್ರತಿಷ್ಠಾಪಿಸಿ ರಥೋತ್ಸವಕ್ಕೆ ಚಾಲನೆ ನೀಡಲಾಯಿತು. ಈ ರಥೋತ್ಸವದಲ್ಲಿ ಕೊಡಗು ಜಿಲ್ಲೆ ಹಾಗೂ ಅಕ್ಕ ಪಕ್ಕದ ಜಿಲ್ಲೆಗಳಾದ ಮೈಸೂರು ಹಾಸನ ವಿವಿಧ ಭಾಗದ ಮಠಾಧಿಪತಿಗಳು ಪಾಲ್ಗೊಂಡಿದ್ದರು. ಈ ರಥೋತ್ಸವದ ನಂತರ ಮಾಧ್ಯಮದೊಂದಿಗೆ ವಿರಾಜಪೇಟೆಯ ಅರಮೇರಿ ಕಳಂಚೇರಿ ಮಠಾಧಿಪತಿಗಳಾದ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಜಿ ಮಾತನಾಡಿ ನೂರಾರು ವರ್ಷಗಳ ಇತಿಹಾಸ ಇರುವ ಗುರುಸಿದ್ಧ ವೀರೇಶ್ವರ ಸ್ವಾಮಿಯು ಐ ಸ್ಸಾನದಲ್ಲಿ ಪ್ರತಿವರ್ಷ ಏಪ್ರಿಲ್ ತಿಂಗಳ ಹುಣ್ಣಿಮೆಯ ಮೊದಲೇ ದಿನದಲ್ಲಿ ಈ ರಥೋತ್ಸವ ಹಾಗೂ ಜಾತ್ರಾ ಮಹೋತ್ಸವವು ನೆರವೇರುತ್ತಿದೆ. ಮೂರು ದಿನಗಳಿಂದಲೂ ಕೂಡ ವಿಶೇಷ ರೀತಿಯಲ್ಲಿ ಪೂಜಾ ಕಾರ್ಯಕ್ರಮಗಳು ಜರುಗುತ್ತಿದ್ದು ಸುತ್ತಮುತ್ತಲು ಹಲವಾರು ದೂರಗಳಿಂದ ಬರುವ ಭಕ್ತಾದಿಗಳು ಇಷ್ಟಾರ್ಥವನ್ನು ಸಿದ್ಧಿಸುವ ಶಕ್ತಿಯನ್ನು ಈ ಪುಣ್ಯ ಕ್ಷೇತ್ರವು ಹೊಂದಿದ್ದು ಪ್ರತಿವರ್ಷದಂತೆ ಈ ವರ್ಷವೂ ಕೂಡ ಸಾವಿರಾರು ಸಂಖ್ಯೆಯಲ್ಲಿ ಭಕ್ತ ಸಮೂಹವು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಈ ತಪೋವನ ಕ್ಷೇತ್ರಕ್ಕೆ ಆಗಮಿಸಿ ರಥೋತ್ಸವದಲ್ಲಿ ಹಾಗೂ ಜಾತ್ರಾ ಮಹೋತ್ಸವದಲ್ಲಿ ಪಾಲ್ಗೊಂಡಿರುವ ವಿಶೇಷವಾಗಿದೆ.

ಸಂದರ್ಭ ಈ ತಪೋವನದ ಕ್ಷೇತ್ರದ ಮಹಾಂತ ಶಿವಲಿಂಗಸ್ವಾಮೀಜಿಗಳು ಬೆಟ್ಟದಪುರದ ಮಠಾಧಿಪತಿಗಳಾದ ಶ್ರೀ ಚನ್ನಬಸವ ದೇಶೀಕೇಂದ್ರ ಸ್ವಾಮಿಜಿ. ಹಾಗೂ ಕಿರಿಕೊಡ್ಲಿ ಮಠಾಧಿಶರಾದ ಸದಾಶಿವ ಸ್ವಾಮಿಜಿ. ತೊರೆನೂರು ಮಠಾಧಿಶರಾದ ಮಲ್ಲೇಶ್ ಸ್ವಾಮೀಜಿ ಬಸವಪಟ್ಟಣದ ತೋಟದಾರ್ಯ ಸಂಸ್ಥಾನ ಮಠದ ಮಠಾಧಿಪತಿಗಳಾದ ಸ್ವತಂತ್ರ ಬಸವಲಿಂಗ ಶಿವಯೋಗಿ ಸ್ವಾಮೀಜಿ ಸಿದ್ಧಗಳ್ಳಿ ಮಠಾಧೀಶರಾದ ಇಮ್ಮಡಿ ಶಿವಲಿಂಗ ಸ್ವಾಮೀಜಿ..ಹಾಗೂ ಪಿರಿಯಾಪಟ್ಟಣದ ಶಾಸಕರಾದ ಕೆ.ಮಹದೇವ್. ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಮಹೇಶ್. ಹಾಗೂ ಓಂಕಾರ್ ಪಟೇಲ್, ಬಸವರಾಜ್, ಸುರೇಶ್, ಮಂಜು, ಚಂದ್ರಕಾಂತ್ ಶ್ರೀ ಗುರುಸಿದ್ಧ ವೀರೇಶ್ವರ ಸ್ವಾಮಿಯವರ ಶ್ರೀ ತಪೋಕ್ಷೇತ್ರ ಅಭಿವೃದ್ಧಿ ಸೇವಾ ಮಂಡಳಿಯ ಪದಾಧಿಕಾರಿಗಳು ಹಾಗೂ ಸದಸ್ಯರು ಈ ಸಂದರ್ಭ ಹಾಜರಿದ್ದರು.

ಮತದಾರ ಪಟ್ಟಿಯಲ್ಲಿ ಹೆಸರು ತೆಗೆದಿದ್ದಕ್ಕೆ ಆಕ್ರೋಶ

# ತಹಶೀಲ್ದಾರ್, ಶಿರಸ್ತೇದಾರರ ಅಮಾನತಿಗೆ ಒತ್ತಾಯ

**ರಾಯಚೂರು:** ಲೋಕಸಭಾ ಚುನಾವಣೆ ಮತದಾರರ ಪಟ್ಟಿ ಉದ್ದೇಶ ಪೂರ್ವಕವಾಗಿ ಅಲ್ಪಸಂಖ್ಯಾತ ಮತದಾರರನ್ನು ಕಡಿತಗೊಳಿಸಿರುವುದು ಹಾಗೂ ಮತದಾರರ ಸಮ್ಮತಿ ಪಡೆಯದೆ ಸ್ಥಳಾಂತರಿಸಿರುವ ಗೊಂದಲಗಳಿಗೆ ರಾಯಚೂರು ತಹಶೀಲ್ದಾರ್ ಹಾಗೂ ಚುನಾವಣಾ ಶಿರಸ್ತೇದಾರ ಅಮಾನತುಗೊಳಿಸಿ, ಮತದಾನಕ್ಕೆ ಅವಕಾಶ ಮಾಡಿಕೊಡುವಂತೆ ಹೈದ್ರಾಬಾದ್ ಕರ್ನಾಟಕ ಹೋರಾಟ ಸಮಿತಿ ಉಪಾಧ್ಯಕ್ಷ ಡಾ. ರಜಾಕ್ ಉಸ್ತಾದ್ ಹೇಳಿದರು.

ಸೋಮವಾರ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ಕಳೆದ ವಿಧಾನಸಭೆ ಹಾಗೂ ನಗರಸಭೆ ಚುನಾವಣೆಗಳಲ್ಲಿ ಮತದಾನ ಮಾಡಿರುವ ಮತದಾರರಿಗೆ, ಲೋಕಸಭಾ ಚುನಾವಣೆಯಲ್ಲಿ ಮತಗಟ್ಟೆಯೇ ಬದಲಾಗಿದೆ. ಒಂದೇ ಮನೆಯಲ್ಲಿರುವ ಮತದಾರರು ಕೆಲವರಿಗೆ ಒಂದು ಮತಗಟ್ಟೆ, ಇನ್ನೂ ಕೆಲವರಿಗೆ ದೂರದ ಮತಗಟ್ಟೆಗೆ ಸ್ಥಳಾಂತರಿಸಲಾಗಿದೆ. ಮತದಾರರ ಅನುಮತಿ ಇಲ್ಲದೇ ಅರ್ಜಿ ಸಲ್ಲಿಸದೇ ಇದ್ದರೂ ಸ್ಥಳಾಂತರವಾಗುವುದರ ಹಿಂದೆ ದುರುದ್ದೇಶವಿದೆ. ನಗರದ ವಾರ್ಡ್‌ನಂ.10ರಲ್ಲಿರುವ ಮತಗಟ್ಟೆ ಸಂಖ್ಯೆ 130ರ ಕ್ರಮ ಸಂಖ್ಯೆ 30ರಿಂದ 80ರವರೆಗೆ ಮತದಾರರ ಫೋಟೋ ಇದ್ದು, ಹೆಸರು, ವಿಳಾಸ, ತಂದೆಯ ಹೆಸರು ಮುಂಗಳೆ ವಾರಪೇಟೆ ಎಂದು ನಮೂದಿಸಲಾಗಿದೆ. ಇದೇ ರೀತಿ ಸಾವಿರಾರು ಮತದಾರರ ಹೆಸರು ತಿದ್ದುಪಡಿ ಹಾಗೂ ಸ್ಥಳಾಂತರಿಸಲಾಗಿದೆ. ಅನೇಕ ಕಡೆ ಮತದಾರರ ಚೀಟಿ ನೀಡಿಲ್ಲ, ಮತದಾರರ ಪಟ್ಟಿ ದೋಷದಿಂದ ಕೂಡಿರುವುದೇ ಪ್ರಮುಖ ಕಾರಣವಾಗಿದೆ. ಮತದಾರರ ಸೇರ್ಪಡೆ ಮತ್ತು ಕಡಿತಕ್ಕೆ ಅವಕಾಶ ನೀಡಿದ್ದ ಚುನಾವಣಾ ಆಯೋಗ ಅರ್ಜಿ ಸಲ್ಲಿಸದೇ ಇರುವವರನ್ನು ಸ್ಥಳಾಂತರ ಮಾಡಿದ್ದು, ಇನ್ನೂ ಕೆಲವರ ಹೆಸರನ್ನು ಮತದಾರರ ಪಟ್ಟಿಯಿಂದ ರದ್ದುಪಡಿಸಲಾಗಿದೆ. ಗುರುತಿನ ಚೀಟಿ ಇದ್ದು ಮತದಾರರ ಪಟ್ಟಿಯನ್ನು ತಪ್ಪಾಗಿ ಮುದ್ರಿಸಲಾಗಿದೆ. ಮತ್ತೆ ಕೆಲವು ರದ್ದುಗೊಳಿಸಿರುವುದರಿಂದ ಮತದಾನದಿಂದ ವಂಚಿತಗೊಳಿಸುವ ಹುನ್ನಾರ ನಡೆದಿದೆ ಎಂದು ಆರೋಪಿಸಿದರು.

ನಗರದ ಅರಬ್ ಮೊಹಲ್ಲಾ, ಗಾಲೀಬ್ ನಗರ ಸೇರಿದಂತೆ ಮುಸ್ಲಿಂ ಮತದಾರರಿರುವ ಬಡಾವಣೆಗಳಲ್ಲಿಯೇ ಈ ರೀತಿ ಗೊಂದಲವಿದೆ ಎಂದು ದೂರಿದರು. ಜಿಲ್ಲಾ ಚುನಾವಣಾ ಅಧಿಕಾರಿಗಳು ಮತದಾರರ ಪಟ್ಟಿ ಗೊಂದಲವನ್ನು ನಿವಾರಿಸಬೇಕು. ದುರುದ್ದೇಶ ಪೂರ್ವಕವಾಗಿ ಮತದಾರರ ಪಟ್ಟಿ ಗೊಂದಲಕ್ಕೆ ಕಾರಣ ವಾಗಿರುವ ತಹಶೀಲ್ದಾರ ಹಾಗೂ ಶಿರಸ್ತೇದಾರರನ್ನು ಅಮಾನತುಗೊಳಿಸಬೇಕು. ಮತದಾರರಿಗೆ ಮತದಾನ ಮಾಡಲು ಅವಕಾಶ ನೀಡಬೇಕು. ಇಲ್ಲವಾದಲ್ಲಿ ಮತಗಟ್ಟೆಮುಂದೆ ಪ್ರತಿಭಟನೆ ನಡೆಸಬೇಕಾಗುತ್ತದೆ ಎಂದು ಹೇಳಿದ ಅವರು ಗೊಂದಲ ಕುರಿತು ರಾಜ್ಯ ಮತ್ತು ಕೇಂದ್ರ ಚುನಾವಣಾ ಆಯೋಗಕ್ಕೆ ದೂರು ನೀಡುವುದಾಗಿ ಹೇಳಿದರು. ಈ ಸಂದರ್ಭದಲ್ಲಿ ನಗರಸಭೆ ಮಾಜಿ ಸದಸ್ಯ ಶಂಶುದ್ದೀನ್, ಚಂದ್ರಶೇಖರ ನಾಯಕ, ಶಕೀಲ್ ಅನ್ಸಾರಿ ಉಪಸ್ಥಿತರಿದ್ದರು.

# ದೈತ್ಯ ಮೊಸಳೆ ರಕ್ಷಿಸಿದ ಗ್ರಾಮಸ್ಥರು

**ಲೋಕಾಪುರ:** ಆಹಾರ ಅರಸಿ ರೈತರ ಜಮೀನಿಗೆ ನುಗ್ಗಿದ ದೈತ್ಯ ಮೊಸಳೆಯೊಂದನ್ನು ಸ್ಥಳೀಯರೇ ರಕ್ಷಿಸಿ ಸೋಮವಾರ ಅರಣ್ಯ ಇಲಾಖೆಗೆ ಒಪ್ಪಿಸಿದ್ದಾರೆ.

ಘಟಪ್ರಭಾ ನದಿ ತೀರದ ರೈತ ಸಿದ್ದಪ್ಪ ನಿಂಗಪ್ಪ ಮಂಟೂರ ಅವರ ಜಮೀನಿನಲ್ಲಿ ದೈತ್ಯಾಕಾರದ ಮೊಸಳೆ ಪತ್ತೆಯಾಗಿದ್ದು, ಗ್ರಾಮಸ್ಥರು ಭಯಭೀತರಾಗಿದ್ದರು. ಗ್ರಾಮಸ್ಥರೇ ಕಾರ್ಯಾಚರಣೆ ನಡೆಸಿ ಹಗ್ಗದಿಂದ ಬಂಧಿಸಿ ಅರಣ್ಯ ಇಲಾಖೆ ಅಧಿಕಾರಿಗಳ ಗಮನಕ್ಕೆ ತಂದಿದ್ದಾರೆ. ಸುದ್ದಿ ತಿಳಿದು ಸ್ಥಳಕ್ಕೆ ಆಗಮಿಸಿದ ಅರಣ್ಯ ಇಲಾಖೆ ಅಧಿಕಾರಿಗಳು ಮೊಸಳೆಯನ್ನು ತಮ್ಮ ಸುಪರ್ದಿಗೆ ಪಡೆದಿದ್ದಾರೆ. ಮೊಸಳೆಯನ್ನು ಕೊಣ್ಣೂರ ಜಲಾಶಯದಲ್ಲಿ ಬಿಡಲಾಗುವುದು ಎಂದು ಅಧಿಕಾರಿಗಳು ತಿಳಿಸಿದ್ದಾರೆ. ಬೇಸಿಗೆ ದಿನಗಳಲ್ಲಿ ನದಿಯಲ್ಲಿ ನೀರು ಖಾಲಿ ಆಗಿದ್ದರಿಂದ ಆಹಾರ ಅರಸಿ ಮೊಸಳೆಗಳು ನದಿ ತೀರದ ಜಮೀನುಗಳಿಗೆ ಬರುವುದು ಸಾಮಾನ್ಯ. ಗ್ರಾಮಸ್ಥರು ಎಚ್ಚರ ವಹಿಸಬೇಕು ಎಂದು ಅಧಿಕಾರಿಗಳು ತಿಳಿಸಿದರು.

ಈ ವೇಳೆಯಲ್ಲಿ ಅರಣ್ಯಾಧಿಕಾರಿಗಳಾದ ಎಲ್. ಬಿ ದೇಶನೂರ, ಎ.ವೈ ನಾಡಗೌಡ, ಪರಮಳ, ಮತ್ತು ಸ್ಥಳೀಯರಾದ ಸಿದ್ದಪ್ಪ ಮಂಟೂರ, ಕಾಡಪ್ಪ ಬುಗಟೆ ಪ್ರಗೋಳ, ರವಿ ಅರಗಂಜಿ ಹಾಗೂ ಗ್ರಾಮಸ್ಥರು ಇದ್ದರು.

# ಮರಗಳ್ಳತನ: ಆರೋಪಿ ಸೆರೆ

**ಕುಶಾಲನಗರ:** ಕಳೆದ ಜನವರಿ ತಿಂಗಳಲ್ಲಿ ನಡೆದ ಬೀಟಿ ಮರ ಕಳ್ಳತನ ಆರೋಪದಡಿ ತಲೆ ಮರೆಸಿಕೊಂಡಿದ್ದ ಆರೋಪಿಯನ್ನು ಸೋಮವಾರ ಬಂಧಿಸಲಾಗಿದೆ.

ಬಾಣಾವರ ಮೀಸಲು ಅರಣ್ಯ ಪ್ರದೇಶದಲ್ಲಿ ಬೀಟಿ ಮರ ಕಡಿದು ಸಾಗಾಟ ಮಾಡುತ್ತಿದ್ದ ಸಂದರ್ಭ ಪರಾರಿಯಾಗಿದ್ದ ರಮೇಶ್ ಎಂಬಾತನನ್ನು ಅರಣ್ಯ ಇಲಾಖೆಯವರು ಸೋಮವಾರ ಸೋಮವಾರಪೇಟೆಯಲ್ಲಿ ಬಂಧಿಸಿ ನ್ಯಾಯಾಲಯಕ್ಕೆ ಒಪ್ಪಿಸಿದ್ದಾರೆ. ಈ ಸಂದರ್ಭ ಬಾಣಾವರ ಉಪ ವಲಯ ಅರಣ್ಯಾಧಿಕಾರಿ ಮಹಾದೇವ ನಾಯಕ್ ಮತ್ತು ಸಿಬ್ಬಂದಿ ವರ್ಗ ಇದ್ದರು.

## ಏ.27, 28 ರಂದು ಅಹೋರಾತ್ರಿ ಗಮಕ

**ಶಿವಮೊಗ್ಗ :** ವೇದ ಶ್ರೀ ಮಾರ್ಕಂಡೇಯ ಅವಧಾನಿಗಳ ಸ್ಮರಣಾರ್ಥ, ಹೊಸಹಳ್ಳಿಯ ಗಮಕ ಭವನದಲ್ಲಿ ಏ. 27 ಮತ್ತು 28 ರಂದು ಅಹೋರಾತ್ರಿ ಗಮಕ ಕಾರ್ಯಕ್ರಮವನ್ನು ಗಮಕ ಕಲಾ ಪರಿಷತ್ ವತಿಯಿಂದ ಆಯೋಜಿಸಲಾಗಿದೆ. ಏ.27ರಂದು ಬೆಳಗ್ಗೆ 9.30ಕ್ಕೆ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಉದ್ಘಾಟಿಸಲಿದ್ದಾರೆ. ಗಮಕ ಪರಿಷತ್ ಗೌರವಾಧ್ಯಕ್ಷ ಹೆಚ್.ಆರ್. ಕೇಶವಮೂರ್ತಿ ಅಧ್ಯಕ್ಷತೆ ವಹಿಸುವರು.





## ಕಿರು ಸುದ್ದಿ

### ಏ.24: ಉಚಿತ ಆರೋಗ್ಯ ತಪಾಸಣೆ

**ಶಿವಮೊಗ್ಗ:** ನಿದಿಗೆಯ ಟಿಎಂಎಇಎಸ್ ಆಯುರ್ವೇದ ಮಹಾವಿದ್ಯಾಲಯ ಮತ್ತು ಆಸ್ಪತ್ರೆ ವತಿಯಿಂದ ಉಚಿತ ಆರೋಗ್ಯ ತಪಾಸಣೆ, ಸಲಹೆ ಹಾಗೂ ಸಮಾಲೋಚನೆ ಹಾಗೂ ರಿಯಾಯ್ತಿ ದರದಲ್ಲಿ ಔಷಧ ಸೌಲಭ್ಯ ಶಿಬಿರವನ್ನು ಏ.24ರ ಬೆಳಗ್ಗೆ 10 ರಿಂದ ಸಂಜೆ 5ರವರೆಗೆ ಏರ್ಪಡಿಸಲಾಗಿದೆ ಎಂದು ಮಹಾವಿದ್ಯಾಲಯದ ಪ್ರಾಂಶುಪಾಲ ಜಿ.ಎ.ಹಿರೇಮಠ ತಿಳಿಸಿದರು. ಸೋಮವಾರ ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಅವರು, ನಿದಿಗೆಯಲ್ಲಿರುವ ಆಯುರ್ವೇದ ಮಹಾವಿದ್ಯಾಲಯದ ಆಸ್ಪತ್ರೆಯಲ್ಲಿ ಹಾಗೂ ಗೋಪಾಳದ ಶ್ರೀ ಚಂದ್ರಮೌಳೇಶ್ವರ ಪಂಚಕರ್ಮ ಮತ್ತು ಕ್ಷಾರಸೂತ್ರ ಚಿಕಿತ್ಸಾ ಕೇಂದ್ರದಲ್ಲಿ ಶಿಬಿರ ನಡೆಯಲಿದೆ ಎಂದರು. ಪ್ರಸ್ತುತ ವಸಂತ ಋತುವಿನಲ್ಲಿ ಕಾಡುವ ಎಲ್ಲಾ ರೀತಿಯ ಕಫ ಸಂಬಂಧಿತ ಕಾಯಿಲೆಗಳಿಗೆ ಹಾಗೂ ಎಲ್ಲ ಆರೋಗ್ಯವಂತರಿಗೆ ವಸಂತ ಋತು ವಮನಕರ್ಮ ಚಿಕಿತ್ಸೆಯನ್ನು ನೀಡಲಾಗುತ್ತದೆ ಎಂದು ತಿಳಿಸಿದರು.

ಚರ್ಮರೋಗ ಮತ್ತು ವಸಂತ ಋತು ವಮನಕರ್ಮ ಚಿಕಿತ್ಸಾ ಶಿಬಿರವನ್ನು ಏ.22 ರಿಂದ ಆರಂಭಗೊಂಡಿದ್ದು, ಮೇ 4 ರವರೆಗೆ ನಡೆಯಲಿದೆ. ತಜ್ಞವೈದ್ಯರಿಂದ ಉಚಿತ ತಪಾಸಣೆ ಸಲಹೆ ಹಾಗೂ ಸಮಾಲೋಚನೆ ಪಡೆಯಬಹುದಾಗಿದೆ. ಮೊಡವೆ, ಬಿಳುಪುಕಲೆ, ಬೊಂಗು, ತ್ವಚೆಯ ಸಮಸ್ಯೆ, ಸೋರಿಯಾಸಿಸ್, ಇಸುಬು, ತೊನ್ನು, ಅಲರ್ಜಿ, ಕಜ್ಜಿ ತುರಿಕೆ, ತಲೆ ಹೊಟ್ಟು, ಕೂದಲು ಉದುರುವಿಕೆ, ನೆರೆ ಕೂದಲು ಮೊದಲಾದವುಗಳಿಗೆ ಚಿಕಿತ್ಸೆ ಪಡೆಯಬಹುದಾಗಿದೆ ಎಂದರು.

ಶಿಬಿರದಲ್ಲಿ ರಿಯಾಯಿತಿ ದರದಲ್ಲಿ ಔಷಧಗಳು ದೊರೆಯುತ್ತವೆ. ವಿವರಗಳಿಗೆ 08182-246360, 251215, 7259685135 ಸಂಪರ್ಕಿಸಬಹುದಾಗಿದೆ ಎಂದರು. ಪತ್ರಿಕಾಗೋಷ್ಠಿಯಲ್ಲಿ ಡಾ. ಸದಾನಂದ ಜೋಷಿ ಇದ್ದರು.

### ಮತದಾನ ಮಾಡಿದವರಿಗೆ ಉಚಿತ ಯೋಗ

**ಶಿವಮೊಗ್ಗ:** ಮತದಾನದಲ್ಲಿ ರಾಜ್ಯದಲ್ಲಿಯೇ ಜಿಲ್ಲೆಯನ್ನು ನಂಬರ್ ಒನ್ ಮಾಡುವ ಜಿಲ್ಲಾಧಿಕಾರಿ ಕೆ.ಎ. ದಯಾನಂದ್ ಅವರ ಕಾರ್ಯಕ್ರಮಕ್ಕೆ ಪೂರಕವಾಗಿ ಮತದಾನ ಮಾಡುವವರಿಗೆ ರಾಘವೇಂದ್ರ ಯೋಗ ಕೇಂದ್ರದಿಂದ ಒಂದು ವಾರ ಉಚಿತ ಯೋಗ ತರಬೇತಿ ನೀಡುವುದಾಗಿ ಯೋಗ ತಜ್ಞ ಗೋಪಾಲಕೃಷ್ಣ ತಿಳಿಸಿದ್ದಾರೆ. ಐದು ವರ್ಷಕ್ಕೊಮ್ಮೆ ಬರುವ ಚುನಾವಣೆಯಲ್ಲಿ ಮತದಾನ ಮಾಡದೆ ಬೇರೆ ಬೇರೆ ಕಾರಣ ನೀಡಿ ತಪ್ಪಿಸಿಕೊಳ್ಳದೆ ತಪ್ಪದೆ ಹಕ್ಕು ಚಲಾಯಿಸುವವರಿಗೆ ಈ ರಿಯಾಯ್ತಿ ನೀಡಲಾಗುತ್ತದೆ ಎಂದು ಹೇಳಿದರು.

ಹೆಚ್ಚಿನ ಮಾಹಿತಿಗೆ ಹಾಗೂ ಯೋಗ ತರಬೇತಿಗೆ ರಾಘವೇಂದ್ರ ಯೋಗ ಕೇಂದ್ರ, ಗೋಪಿ ವೃತ್ತ ಮಕ್ಕಳ ವಿದ್ಯಾ ಸಂಸ್ಥೆ ಇಲ್ಲಿ ಸಂಪರ್ಕಿಸಬಹುದಾಗಿದೆ. ಮೊ. 94484 14849 ಮೂಲಕ ಸಂಪರ್ಕಿಸಲು ಕೋರಿದ್ದಾರೆ.

### ಹಣ ಪತ್ತೆ : ಐಟಿ ದಾಳಿಗೆ ಸಿಲುಕಿದ ಮಾಜಿ ಶಾಸಕನ ಪುತ್ರ

**ಶಿವಮೊಗ್ಗ / ಭದ್ರಾವತಿ:** ಲೋಕಸಭಾ ಚುನಾವಣೆಗೆ ಮತದಾರರನ್ನು ಸೆಳೆಯಲು ಹಣ ಹಂಚುತ್ತಿರುವಾಗಲೇ ಭದ್ರಾವತಿ ಮಾಜಿ ಶಾಸಕ ಅಪ್ಪಾಜಿ ಗೌಡ ಪುತ್ರ, ಐಟಿ ಅಧಿಕಾರಿಗಳಿಗೆ ಸೋಮವಾರ ಸಿಕ್ಕಿಬಿದ್ದಿದ್ದಾರೆ.

ಮಾಜಿ ಅಪ್ಪಾಜಿಗೌಡರ ಪುತ್ರ ಅಜಿತ್ ಮತದಾರರಿಗೆ ಹಣ ಹಂಚುತ್ತಿರುವಾಗಲೇ ಸಿಕ್ಕಿಬಿದ್ದಿದ್ದಾರೆ. ಇವರು ಭದ್ರಾವತಿಯ ಎಂಪಿಎಂ ಸುರಗಿತೋಪಿನಲ್ಲಿ ಹಣ ಹಂಚುತ್ತಿದ್ದರು. ಈ ಬಗ್ಗೆ ಐಟಿ ಅಧಿಕಾರಿಗಳಿಗೆ ಖಚಿತ ಮಾಹಿತಿ ಲಭ್ಯವಾಗಿತ್ತು. ನಂತರ ಎಂಪಿಎಂ ಠಾಣೆ ಪೊಲೀಸರ ನೆರವಿನೊಂದಿಗೆ ದಾಳಿ ನಡೆಸಿದರು. ಈ ವೇಳೆ 1.39 ಲಕ್ಷ ರೂ. ನಗದನ್ನು ವಶಪಡಿಸಿಕೊಂಡಿದ್ದಾರೆ.

ಅಜಿತ್‌ಕುಮಾರ್ ಸೋಮವಾರ ಬೆಳಗ್ಗೆಯಿಂದಲೇ ಮತದಾರರಿಗೆ ಹಣ ಹಂಚಿಕೆ ಮಾಡುತ್ತಿದ್ದರು ಎನ್ನಲಾಗಿದೆ. ಈ ಕುರಿತು ಐಟಿ ಅಧಿಕಾರಿಗಳಿಗೆ ಮಾಹಿತಿ ಲಭ್ಯವಾಗಿತ್ತು . ದಾಳಿ ಸಂಬಂಧ ಮಾಜಿ ಶಾಸಕ ಅಪ್ಪಾಜಿಗೌಡ ಅವರಿಗೂ ನೋಟಿಸ್ ಜಾರಿ ಮಾಡಲಾಗಿದೆ. ಅಲ್ಲದೇ ಅವರ ಓರ್ವ ಆಪ್ತನನ್ನು ಕೂಡ ವಶಕ್ಕೆ ಪಡೆಯಲಾಗಿದೆ ಎಂದು ಮೂಲಗಳು ತಿಳಿಸಿವೆ.

ಮೂರು ದಿನಗಳ ಹಿಂದಷ್ಟೇ ಭದ್ರಾವತಿ ಕಡೆಗೆ ಕಾರಿನ ಚಕ್ರದಲ್ಲಿ ತುಂಬಿಕೊಂಡು ಸಾಗಿಸುತ್ತಿದ್ದ 2.30 ಕೋಟಿ ರೂ. ನಷ್ಟು ಬೃಹತ್ ಹಣವನ್ನು ವಶಪಡಿಸಿಕೊಂಡಿದ್ದನ್ನು ಸ್ಮರಿಸಬಹುದು.

# ಐವರು ಕನ್ನಡಿಗರ ಬಲಿ

ಕಾಣೆಯಾಗಿರುವ ಮಾರೇಗೌಡ ಮತ್ತು ಪುಟ್ಟರಾಜು ಅವರ ಪತ್ತೆಗೆ ಸರ್ಕಾರ ಎಲ್ಲ ಅಗತ್ಯ ಕ್ರಮ ಕೈಗೊಂಡಿದ್ದು, ಈ ಕುರಿತಂತೆ ವಿದೇಶಾಂಗ ಸಚಿವಾಲಯ ಹಾಗೂ ರಾಯಭಾರ ಕಚೇರಿಯೊಂದಿಗೆ ನಿರಂತರ ಸಂಪರ್ಕದಲ್ಲಿದ್ದೇವೆ ಎಂದು ಟ್ವಿಟ್ಟರ್ ಮೂಲಕ ಮುಖ್ಯಮಂತ್ರಿಗಳು ಸ್ಪಷ್ಟಪಡಿಸಿದ್ದಾರೆ.

**ಪ್ರವಾಸಕ್ಕೆ ವ್ಯವಸ್ಥೆ ಮಾಡಲು ಹೋಗಿ ಮಡಿದರು:** ನೆಲಮಂಗಲ ಮತ್ತು ತುಮಕೂರಿನ ಏಳು ಮಂದಿ ಸ್ನೇಹಿತರಾಗಿದ್ದು, ಶ್ರೀಲಂಕಾ ಪ್ರವಾಸಕ್ಕೆ ಮುಂಗಡವಾಗಿ ಹೋಗಿ ರೂಮ್ ಬುಕ್ ಮಾಡಲು ಹೋಗಿದ್ದರು ಎನ್ನಲಾಗುತ್ತಿದೆ. ಜೆಡಿಎಸ್ ಮುಖಂಡರಾಗಿದ್ದ ಇವರು ಚಿಕ್ಕಬಳ್ಳಾಪುರ ಲೋಕಸಭಾ ಕ್ಷೇತ್ರದ ಚುನಾವಣೆಯಲ್ಲಿ ಮೈತ್ರಿ ಪಕ್ಷದ ಅಭ್ಯರ್ಥಿ ಎಂ.ವೀರಪ್ಪ ಮೊಯ್ಲಿ ಪರ ಪ್ರಚಾರ ನಡೆಸಿದ್ದರು. ಚುನಾವಣೆ ಮುಗಿದ ಬಳಿಕ ಏ.20 ರಂದು ಶ್ರೀಲಂಕಾ ಪ್ರವಾಸ ಕೈಗೊಂಡಿದ್ದರು. ಶ್ರೀಲಂಕಾದ ಶಾಂಗ್ರಿಲಾ ಹೋಟೆಲ್‌ನ 6ನೇ ಮಹಡಿಯಲ್ಲಿರುವ 618 ಮತ್ತು 619ನೇ ರೂಮಿನಲ್ಲಿ ತಂಗಿದ್ದ ಎಲ್ಲರೂ ಬೆಳಗ್ಗೆ 8.45ರ ಸುಮಾರಿಗೆ ಹೋಟೆಲ್‌ನ ಮೂರನೇ ಮಹಡಿಯಲ್ಲಿರುವ ಊಟದ ಹಾಲ್‌ಗೆ ಆಗಮಿಸಿದ್ದರು. ಈ ಎಲ್ಲರೂ ಊಟದ ಹಾಲ್‌ಗೆ ಆಗಮಿಸಿದ ಸಂದರ್ಭದಲ್ಲೇ ಬಾಂಬ್ ಸ್ಫೋಟಗೊಂಡು ಈ ದುರ್ಘಟನೆ ಸಂಭವಿಸಿದೆ.

ಬಾಂಬ್ ಸ್ಫೋಟಕ್ಕೆ ಕೆಲವೇ ನಿಮಿಷಗಳ ಮುನ್ನ (8.40) ಹನುಮಂತರಾಯಪ್ಪ ಅವರು ದೂರವಾಣಿ ಮೂಲಕ ಪುತ್ರನೊಂದಿಗೆ ಮಾತುಕತೆ ನಡೆಸಿ ತಿಂಡಿಗೆ ತೆರಳುತ್ತಿರುವುದಾಗಿ ಹೇಳಿದ್ದಾರೆ. ಇದಾದ ಕೆಲವೇ ನಿಮಿಷಗಳಲ್ಲಿ ಅಲ್ಲಿ ಬಾಂಬ್ ಸ್ಫೋಟಗೊಂಡಿದೆ ಎಂದು ಹೇಳಲಾಗುತ್ತಿದೆ.

ಸೋಮವಾರ ಒಟ್ಟಿಗೆ ಸಂಘದ ಮೂಲಕ 40 ಜನರಿಗೆ ಪ್ರವಾಸ ಯೋಜನೆ ಮಾಡಲಾಗಿತ್ತು. ಅದರ ವ್ಯವಸ್ಥೆಗಾಗಿ ಏಳು ಜನ ಶನಿವಾರ ತೆರಳಿದ್ದರು. ಅಂದುಕೊಂಡಂತೆ ಆಗಿದ್ದರೆ ಸೋಮವಾರ 30 ಜನರು ಕೊಲಂಬೊಗೆ ತೆರಳಬೇಕಿತ್ತು. ಆ ಹಿನ್ನೆಲೆಯಲ್ಲಿ ವಿಮಾನದ ಟಿಕೆಟ್ ಕೂಡ ಬುಕ್ ಮಾಡಲಾಗಿತ್ತು. ಅದಕ್ಕಾಗಿ ಶಾಂಗ್ರಿಲಾ ಹೋಟೆಲ್‌ನಲ್ಲಿ ಎಲ್ಲರಿಗೂ ರೂಮ್ ಬುಕ್ ಮಾಡಲಾಗಿತ್ತು ಎನ್ನಲಾಗುತ್ತಿದೆ.

ಶಾಂಗ್ರಿಲಾ ಹೋಟೆಲ್ ಪಕ್ಕದ ಹಿಲ್ಟನ್ ಹೋಟೆಲ್‌ನಲ್ಲಿ ತಂಗಿದ್ದ 8-10 ಕನ್ನಡಿಗರು ಸೇರಿದಂತೆ 100 ಜನರನ್ನು 30 ಕಿ.ಮೀ.ದೂರದ ಬೇರೆ ಹೋಟೆಲ್‌ಗೆ ಸೈನಿಕರು ಹಾಗೂ ಭದ್ರತಾ ಸಿಬ್ಬಂದಿ ಸ್ಥಳಾಂತರಿಸಿದ್ದಾರೆ ಎನ್ನಲಾಗುತ್ತಿದೆ.

### ಉದ್ಯಮಿ ರಮೇಶ್ ಕುಟುಂಬದವರಿಗೆ ಸಾಂತ್ವನ

ಲಿಕ್ಕರ್ ಉದ್ಯಮಿ ರಮೇಶ್.ಎಲ್. ಪತ್ನಿ ಮಂಜುಳಾ, ಮಗಳು ದೀಕ್ಷಾ, ಮಗ ಶೋಭಿತ್ ಅವರನ್ನು ಅಗಲಿದ್ದಾರೆ. ರಮೇಶ್ ಅವರ ಸಾವಿನ ವಿಷಯ ತಿಳಿದ ಸ್ನೇಹಿತರು, ಬಂಧುಗಳು ಶೋಕ ವ್ಯಕ್ತಪಡಿಸಿದರು. ಶಾಸಕ ಜ್ಯೋತಿಗಣೇಶ್, ಡಿವೈಎಸ್‌ಪಿ ಅವರ ಮನೆಗೆ ಭೇಟಿ ನೀಡಿ ಕುಟುಂಬದವರಿಗೆ ಸಾಂತ್ವನ ಹೇಳಿದರು.

ಮೂಲತಃ ಕುಣಿಗಲ್ ನಿವಾಸಿಯಾದ ರಮೇಶ್ ಗೌಡ ಅವರು ತುಮಕೂರಿನ ಸರಸ್ವತಿಪುರದಲ್ಲಿ ಸ್ವಂತ ಮನೆ ಕಟ್ಟಿಕೊಂಡು ಹಲವು ವರ್ಷಗಳಿಂದ ಇಲ್ಲಿ ವಾಸವಾಗಿದ್ದರು. ಇವರು ತುಮಕೂರಿನ ಜನತಾ ಲಿಕ್ಕರ್‌ಶಾಪ್ ಮಾಲೀಕರಾಗಿದ್ದರು.

### ಕುಟುಂಬಸ್ಥರಿಗೆ ಸಾಂತ್ವನ: ವೀಸಾ ವ್ಯವಸ್ಥೆ

ಇದೇ ವೇಳೆ ಮಾತನಾಡಿದ ಸದಾನಂದಗೌಡ, ಮೃತರ ಸಂಬಂಧಿಕರು ಶ್ರೀಲಂಕಾಕ್ಕೆ ತೆರಳಲು ವೀಸಾ ವ್ಯವಸ್ಥೆ ಮಾಡಿಕೊಡುವಂತೆ ಕೇಂದ್ರ ಸರ್ಕಾರ ಮತ್ತು ಶ್ರೀಲಂಕಾ ಸರ್ಕಾರಕ್ಕೆ ಕೋರಲಾಗಿದೆ. ಮೃತದೇಹಗಳ ಪತ್ತೆಹಚ್ಚುವ ಕಾರ್ಯ ನಡೆಯುತ್ತಿದೆ. ನಾಪತ್ತೆಯಾದವರ ಶೋಧ ಕಾರ್ಯ ಕೂಡ ಮುಂದುವರಿದಿದೆ ಎಂದರು.

### ಮೃತರಿಗೆ ಕೇಂದ್ರದಿಂದ ನೆರವಿಗೆ ಮೊಯ್ಲಿ ಮನವಿ

ಶ್ರೀಲಂಕಾದ ಸರಣಿ ಬಾಂಬ್ ಸ್ಫೋಟದಿಂದ ಮೃತಪಟ್ಟಿರುವ ಐವರ ಮೃತದೇಹಗಳು ಗುರುತು ಪತ್ತೆಯಾಗಿದ್ದು, ಉಳಿದಂತೆ ಶಿವಕುಮಾರ್, ಪುಟ್ಟರಾಜು, ಮಾರೇಗೌಡ ಅವರ ಗುರುತು ಪತ್ತೆಯಾಗಬೇಕಿದೆ ಎಂದು ಕೇಂದ್ರ ಮಾಜಿ ಸಚಿವ ಹಾಗೂ ಸಂಸದ ವೀರಪ್ಪ ಮೊಯ್ಲಿ ಹೇಳಿದ್ದಾರೆ.

ಬೆಂಗಳೂರಿನ ನೆಲಮಂಗಲದ ಹನುಮಂತರಾಯಪ್ಪ ಅವರ ಮನೆಗೆ ಸೋಮವಾರ ಭೇಟಿ ನೀಡಿದ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಪಾರ್ಥಿವ ಶರೀರಗಳ ಗುರುತು ಸಿಕ್ಕ ಬಳಿಕ ಅವುಗಳನ್ನು ರಾಜ್ಯಕ್ಕೆ ತರಲಾಗುವುದು ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ವಿದೇಶಾಂಗ ಸಚಿವೆ ಸುಷ್ಮಾಸ್ವರಾಜ್ ಅವರ ಜೊತೆ ದೂರವಾಣಿಯಲ್ಲಿ ಮಾತನಾಡಿದ ಮೊಯ್ಲಿ ಅವರು, ಮೃತರ ಮಾಹಿತಿ ವಿನಿಮಯ ಮಾಡಿಕೊಂಡರು. ಕೇಂದ್ರ ಸರ್ಕಾರದ ತುರ್ತು ಕಾರ್ಯ ಚಟುವಟಿಕೆಗಳ ಬಗ್ಗೆಯೂ ಮೆಚ್ಚುಗೆ ವ್ಯಕ್ತಪಡಿಸಿದರಲ್ಲದೆ, ಸರಣಿ ಸ್ಫೋಟದಲ್ಲಿ ತೊಂದರೆಗೀಡಾಗಿರುವವರಿಗೆ ಇನ್ನಷ್ಟು ನೆರವು ನೀಡುವಂತೆ ಮನವಿ ಮಾಡಿದರು.

# 7 ಆತ್ಮಾಹುತಿ ಬಾಂಬರ್ ಭಾಗಿ

ಈಸ್ಟರ್ ಹಬ್ಬದಂದು ಕೊಲಂಬೊದಲ್ಲಿನ ಸಂತ ಆಂಟನಿ ಚರ್ಚ್, ನೆಗೊಂಬೊದಲ್ಲಿನ ಸಂತ ಸೆಬಾಸ್ಟಿಯನ್ ಚರ್ಚ್ ಮತ್ತು ಬಟ್ಟಿಕಲೋವಾದಲ್ಲಿನ ಝಿಯಾನ್ ಚರ್ಚ್‌ನಲ್ಲಿ ಭಾರೀ ಜನಸ್ತೋಮ ಸೇರುವುದನ್ನು ಮನಗಂಡಿದ್ದ ಉಗ್ರರು ಆತ್ಮಾಹುತಿ ದಾಳಿ ನಡೆಸಿದ್ದಾರೆ. ಇನ್ನು ಪಂಚತಾರಾ ಹೋಟೆಲ್‌ಗಳಾದ ದಿ ಶಾಂಗ್ರೀಲಾ, ದಿ ಸಿನ್ನಾಮನ್ ಗ್ರ್ಯಾಂಡ್ ಮತ್ತು ದಿ ಕಿಂಗ್ಸ್‌ಬರಿಯಲ್ಲೂ ಮೂರು ಬಾಂಬ್ ಸ್ಫೋಟ ನಡೆದಿರುವುದಾಗಿ ವರದಿಯಾಗಿದೆ.

ಶಾಂಗ್ರೀಲಾ ಸಹಿತ ಮೂರು ಪಂಚತಾರಾ ಹೋಟೆಲ್‌ಗಳು ಮತ್ತು ಮೂರು ಚರ್ಚ್‌ಗಳನ್ನು ಗುರಿಯಾಗಿ ಆತ್ಮಾಹುತಿ ಬಾಂಬರ್‌ಗಳು ದಾಳಿ ನಡೆಸಿರುವುದನ್ನು ಗುರುತಿಸಲಾಗಿದೆ ಎಂದು ಸರ್ಕಾರದ ವಿಶ್ಲೇಷಣಾಧಿಕಾರ ಇಲಾಖೆ ತಿಳಿಸಿರುವುದಾಗಿ ಸಂಡೇ ಟೈಮ್ಸ್ ವರದಿ ಮಾಡಿದೆ. 6 ಸ್ಫೋಟ ಸಂಭವಿಸಿ ಕೆಲ ತಾಸುಗಳ ಬಳಿಕ ಕೊಲಂಬೊದಲ್ಲಿ 7ನೇ ಬಾಂಬ್ ಸ್ಫೋಟ ಸಂಭವಿಸಿತ್ತು.

### ಎನ್‌ಟಿಜೆ ಕೈವಾಡ?

ಈ ಹಿಂದೆ ಲಂಕಾದಲ್ಲಿ ಬೌದ್ಧ ವಿಗ್ರಹಗಳನ್ನು ನಾಶ ಮಾಡಿದ್ದು ಇದೇ ಉಗ್ರ ಸಂಘಟನೆಯಾಗಿದೆ. ಈಗ ಕ್ರೈಸ್ತರು ಮತ್ತು ಪ್ರವಾಸಿಗರನ್ನು ಟಾರ್ಗೆಟ್ ಮಾಡಿ ಈ ಸಂಘಟನೆ ಯಾಕೆ ದಾಳಿ ನಡೆಸಿದೆಯೆಂದು ಗೊತ್ತಾಗಿಲ್ಲ. ಅಂತಾರಾಷ್ಟ್ರೀಯ ಉಗ್ರ ಸಂಘಟನೆಗಳೊಂದಿಗೆ ಎನ್‌ಟಿಜೆ ಹೊಂದಿರುವ ಸಂಬಂಧದ ಬಗ್ಗೆಯೂ ತನಿಖೆ ನಡೆಸಲಾಗುತ್ತಿದೆ.

ಶ್ರೀಲಂಕಾದ ಕೊಲಂಬೋ ಪ್ರವಾಸದಲ್ಲಿದ್ದ ಜೆಡಿಎಸ್ ಕಾರ್ಯಕರ್ತರು.

> ಕೊಲಂಬೊ ಸರಣಿ ಬಾಂಬ್ ಸ್ಫೋಟದಲ್ಲಿ ಐದು ಮಂದಿ ಕನ್ನಡಿಗರು ಮೃತಪಟ್ಟಿರುವುದು ದುಃಖದ ಸಂಗತಿ. ಅವರ ಸಾವಿನ ದುಃಖ ಭರಿಸುವ ಶಕ್ತಿಯನ್ನು ಭಗವಂತ ಅವರ ಕುಟುಂಬ ವರ್ಗದವರಿಗೆ ನೀಡಲಿ. ಇಂತಹ ದುಃಖದ ಸಂದರ್ಭದಲ್ಲಿ ಮೃತರ ಕುಟುಂಬದ ಬೆಂಬಲಕ್ಕೆ ಸರ್ಕಾರ ಇರಲಿದೆ.
> ■ ಎಚ್.ಡಿ. ಕುಮಾರಸ್ವಾಮಿ, ಮುಖ್ಯಮಂತ್ರಿ

### ಭಾರತದಲ್ಲೂ ಹೈ ಅಲರ್ಟ್

ಲಂಕಾದಲ್ಲಿ ದಾಳಿಯ ಸಂಚು ರೂಪಿಸಿದ ವ್ಯಕ್ತಿಗಳು ಸಮುದ್ರದ ಮೂಲಕ ಭಾರತದ ಕರಾವಳಿ ಭಾಗವನ್ನು ತಲುಪುವ ಸಾಧ್ಯತೆ ಇದೆ ಎಂದು ಗುಪ್ತಚರ ಸಂಸ್ಥೆಗಳು ಸುಳಿವು ನೀಡಿವೆ. ಈ ಹಿನ್ನೆಲೆಯಲ್ಲಿ ಭಾರತದ ಕರಾವಳಿ ಭಾಗದೊಳಗೆ ಇವರು ನುಸುಳುವ ಸಾಧ್ಯತೆ ಇರುವುದರಿಂದ ಭಾರತೀಯ ಕರಾವಳಿ ಕಾವಲು ಪಡೆ ಹೈ ಅಲರ್ಟ್‌ನಲ್ಲಿದೆ. ಉಗ್ರರನ್ನು ಸಮುದ್ರದಲ್ಲೇ ಸದೆ ಬಡಿಯಲು ಭಾರತೀಯ ನೌಕಾ ಪಡೆಗಳು ಕಾಯುತ್ತಿವೆ.

### 24 ಆರೋಪಿಗಳ ಬಂಧನ

ಶ್ರೀಲಂಕಾದಲ್ಲಿ ಸಂಭವಿಸಿದ ಸರಣಿ ಬಾಂಬ್ ಸ್ಫೋಟ ಪ್ರಕರಣದಲ್ಲಿ ಶ್ರೀಲಂಕಾದ ಪೊಲೀಸರು ಇನ್ನೂ 11 ಜನರನ್ನು ವಶಕ್ಕೆ ಪಡೆದಿದ್ದು ಇದರಿಂದಾಗಿ ಬಂಧಿತರ ಸಂಖ್ಯೆ 24 ಕ್ಕೆ ಏರಿಕೆಯಾಗಿದೆ.

ಘಟನೆ ನಡೆದ ದಿನ ಮೊದಲಿಗೆ ಏಳು ಜನರನ್ನು ಬಂಧಿಸಲಾಗಿತ್ತು. ತನಿಖೆ ತೀವ್ರಗೊಂಡಿದ್ದು ಸೋಮವಾರ 11 ಆರೋಪಿಗಳನ್ನು ಬಂಧಿಸಲಾಗಿದೆ.

### 1000ಕ್ಕೂ ಅಧಿಕ ಭದ್ರತಾ ಸಿಬ್ಬಂದಿ ನಿಯೋಜನೆ

ಶ್ರೀಲಂಕಾ ರಾಜಧಾನಿ ಕೊಲಂಬೊದಲ್ಲಿ 1000ಕ್ಕೂ ಅಧಿಕ ಭದ್ರತಾ ಸಿಬ್ಬಂದಿಯನ್ನು ನಿಯೋಜಿಸಲಾಗಿದೆ ಎಂದು ದೇಶದ ಸೇನಾ ಹೇಳಿಕೆಯನ್ನು ಉಲ್ಲೇಖಿಸಿ ಸ್ಥಳೀಯ ಮಾಧ್ಯಮ ವರದಿ ಮಾಡಿದೆ.

ಬಂದರನಾಯಕೆ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ವಾಯು ಪಡೆಯ ಸಿಬ್ಬಂದಿಯನ್ನು ರವಾನಿಸಲಾಗಿದೆ ಎಂದು ಅದಾ ದೇರಾನ ನ್ಯೂಸ್ ಪೋರ್ಟಲ್ ವರದಿ ಮಾಡಿದೆ.

### ಇನ್ನಷ್ಟು ದಾಳಿ ಸಾಧ್ಯತೆ: ಅಮೆರಿಕ ಎಚ್ಚರಿಕೆ

ಶ್ರೀಲಂಕಾದಲ್ಲಿ ಇನ್ನಷ್ಟು ದಾಳಿಗಳನ್ನ ಸಂಯೋಜಿಸಲು ಉಗ್ರ ಸಂಘಟನೆಗಳು ಸಂಚು ರೂಪಿಸುತ್ತಿವೆ. ಜನನಿಬಿಡ ಪ್ರದೇಶಗಳಾದ ಪ್ರವಾಸಿಗರ ಸ್ಥಳಗಳು, ಬಸ್ ನಿಲ್ದಾಣ, ಶಾಪಿಂಗ್ ಮಾಲ್, ಹೋಟೆಲ್, ಪೂಜಾ ಮಂದಿರ, ಏರ್‌ಪೋರ್ಟ್ ಮೊದಲಾದೆಡೆ ಅನಿರೀಕ್ಷಿತ ರೀತಿಯಲ್ಲಿ ಉಗ್ರರು ದಾಳಿ ಎಸಗುವ ಸಾಧ್ಯತೆ ಇದೆ ಎಂದು ಅಮೆರಿಕ ಸರಕಾರದ ವಿದೇಶಾಂಗ ಇಲಾಖೆ ಎಚ್ಚರಿಸಿದೆ.

### ಇನ್ನೂ 87 ಸ್ಫೋಟಕಗಳು ಪತ್ತೆ

ಕೊಲಂಬೊದ ಪ್ರಮುಖ ಬಸ್ ನಿಲ್ದಾಣವೊಂದರಲ್ಲಿ ಪೊಲೀಸರಿಗೆ 87 ಸ್ಫೋಟಕಗಳು ಪತ್ತೆಯಾಗಿದ್ದು ಅವೆಲ್ಲವನ್ನೂ ನಿಷ್ಕ್ರಿಯಗೊಳಿಸಿದ್ದಾರೆ. ಉಗ್ರಗಾಮಿಗಳು ಈಗಿರುವುದಕ್ಕಿಂತ ತೀವ್ರ ಮಟ್ಟದಲ್ಲಿ ಸ್ಫೋಟ ನಡೆಸಲು ಸಂಚು ರೂಪಿಸಿರುವುದು ಇದರಿಂದ ಸ್ಪಷ್ಟವಾಗಿದೆ. ಲಂಕಾ ಪೊಲೀಸರು ನಗರದ ಹಲವು ಪ್ರಮುಖ ಸ್ಥಳಗಳಲ್ಲಿ ತೀವ್ರ ಶೋಧ ನಡೆಸುತ್ತಿದ್ದಾರೆ. ಇದೇ ಕಾರಣಕ್ಕೆ ಅಲ್ಲಿ ತುರ್ತು ಪರಿಸ್ಥಿತಿ ಹೇರಲಾಗುತ್ತಿದೆ.

ಇದೇ ವೇಳೆ, ಭಾನುವಾರ ಸ್ಫೋಟ ಸಂಭವಿಸಿದ ಚರ್ಚ್ ಸಮೀಪದ ವ್ಯಾನ್‌ವೊಂದರಲ್ಲಿ ಮತ್ತೊಂದು ಸ್ಫೋಟವಾಗಿದೆ. ಭದ್ರತಾ ಪಡೆಗಳು ತಪಾಸಣೆ ನಡೆಸುವ ವೇಳೆ ಈ ಸ್ಫೋಟಕ ಪತ್ತೆಯಾಗಿತ್ತು. ಅದನ್ನು ನಿಷ್ಕ್ರಿಯಗೊಳಿಸುವ ವೇಳೆ ಸ್ಫೋಟವಾಗಿದೆ. ಅಧಿಕಾರಿಗಳ ಪ್ರಕಾರ, ಇದು ನಿಯಂತ್ರಿತ ಸ್ಫೋಟವಾಗಿದೆ. ಅಂದರೆ ಸುರಕ್ಷಿತ ವಿಧಾನದಲ್ಲಿ ಬಾಂಬನ್ನು ಸ್ಫೋಟಗೊಳ್ಳುವಂತೆ ಮಾಡಲಾಗಿದೆ. ಈ ಘಟನೆಯಲ್ಲಿ ಯಾವುದೇ ಪ್ರಾಣಹಾನಿಯಾಗಿಲ್ಲ. ಕೊಲಂಬೊದ ಪೋರ್ಟ್ ಪ್ರದೇಶದಲ್ಲಿ ಶಂಕಾಸ್ಪದ ಪಾರ್ಸೆಲ್ ವಸ್ತುವೊಂದು ಪತ್ತೆಯಾಗಿದ್ದು, ಭದ್ರತಾ ಪಡೆಗಳು ಆ ಸ್ಥಳದಿಂದ ಜನರನ್ನು ತೆರವುಗೊಳಿಸಿದ್ದಾರೆ. ಆ ವಸ್ತುವಿನ ಪರಿಶೀಲನೆ ನಡೆದಿದೆ.

### ಮತ್ತೆ ಕರ್ಫ್ಯೂ ಜಾರಿ:

ಶ್ರೀಲಂಕಾದಲ್ಲಿ ಭಾನುವಾರ ರಾತ್ರಿಯಿಂದ ಇದ್ದ ನಿಷೇಧಾಜ್ಞೆಯನ್ನು ಸೋಮವಾರ ಬೆಳಗ್ಗೆ ತೆರವುಗೊಳಿಸಲಾಗಿತ್ತು. ಈಗ ಸಜೀವ ಬಾಂಬ್‌ಗಳು ಪತ್ತೆಯಾಗುತ್ತಿರುವ ಹಿನ್ನೆಲೆಯಲ್ಲಿ ಮತ್ತೊಮ್ಮೆ ಕರ್ಫ್ಯೂ ಹೇರಲಾಗುತ್ತಿದೆ. ಮತ್ತೆ ಸೋಮವಾರ ರಾತ್ರಿ 8ಗಂಟೆಯಿಂದ ಜಾರಿಯಾಗಿರುವ ನಿಷೇಧಾಜ್ಞೆ ಮಂಗಳವಾರ ಸಂಜೆ 4ರವರೆಗೂ ಇರಲಿದೆ.

# ರಾಜ್ಯದ 14 ಲೋಕಸಭಾ ಕ್ಷೇತ್ರಕ್ಕೆ ಇಂದು ಮತದಾನ

ಸಂಜೆ 6 ಗಂಟೆವರೆಗೆ ಅವಕಾಶ ಇರಲಿದೆ. ಮತದಾರರ ಪಟ್ಟಿಯಲ್ಲಿ ಹೆಸರಿರುವವರು ಮತದಾರರ ಗುರುತಿನ ಚೀಟಿ (ಎಪಿಕ್ ಕಾರ್ಡ್) ಮಾತ್ರವಲ್ಲದೆ, ಆಧಾರ್ ಕಾರ್ಡ್, ಚಾಲನಾ ಪರವಾನಗಿ (ಡಿಎಲ್), ಪಾಸ್‌ಪೋರ್ಟ್ ಸೇರಿದಂತೆ 16 ನಮೂನೆಯ ಗುರುತಿನ ಚೀಟಿಗಳಲ್ಲಿ ಯಾವುದಾದರೊಂದನ್ನು ತೋರಿಸುವ ಮೂಲಕ ಮತ ಚಲಾವಣೆ ಮಾಡಬಹುದಾಗಿರುತ್ತದೆ. ಸಾಧ್ಯವಾದಷ್ಟು ಬಿಸಿಲ ಝಳ ಹೆಚ್ಚಾಗುವ ಮುನ್ನವೇ ಮತದಾನ ಮಾಡಿಬಿಡುವುದು ಒಳಿತು. ಇಲ್ಲದಿದ್ದರೆ, ಬಿಸಿಲೇರಿದಂತೆಯೂ ಮತದಾನ ಮಾಡುವವರ ಸರದಿ ಸಾಲು ಹೆಚ್ಚಾದರೆ ಕಷ್ಟ. ಇಲ್ಲವೇ, ಸಂಜೆ ಬಿಸಿಲಿಳಿಯುವವರೆಗೆ ಕಾಯಬೇಕಾಗುತ್ತದೆ.

**ಘಟಾನುಘಟಿಗಳ ಹಣೆಬರಹ ನಿರ್ಣಯ:** ಮಂಗಳವಾರ ನಡೆಯುವ 14 ಕ್ಷೇತ್ರಗಳಿಗೆ 28,022 ಮತಗಟ್ಟೆ ತೆರೆಯಲಾಗಿದ್ದು, ಇವುಗಳ ಪೈಕಿ ,605 ಮತಗಟ್ಟೆ ಸೂಕ್ಷ್ಮಮತಗಟ್ಟೆಯಾಗಿದೆ. ಬೆಳಗಾವಿ ಲೋಕಸಭಾ ಕ್ಷೇತ್ರದಲ್ಲಿ ಒಟ್ಟು 57 ಮಂದಿ ಸ್ಪರ್ಧಿಸಿದ್ದಾರೆ. ಇದು ಅತಿ ಹೆಚ್ಚು ಮಂದಿ ಅಭ್ಯರ್ಥಿಗಳಿರುವ ಕಣವಾಗಿದೆ. ಚುನಾವಣೆ ನಡೆಯಲಿರುವ ಚಿಕ್ಕೋಡಿ, ಬೆಳಗಾವಿ, ಬಾಗಲಕೋಟೆ, ವಿಜಾಪುರ, ಕಲಬುರ್ಗಿ, ರಾಯಚೂರು, ಬೀದರ್, ಕೊಪ್ಪಳ, ಬಳ್ಳಾರಿ, ಹಾವೇರಿ, ಧಾರವಾಡ, ಉತ್ತರ ಕನ್ನಡ, ದಾವಣಗೆರೆ ಹಾಗೂ ಶಿವಮೊಗ್ಗ ಮತಕ್ಷೇತ್ರಗಳಲ್ಲಿ ಮಲ್ಲಿಕಾರ್ಜುನ ಖರ್ಗೆ, ಬಿ.ವೈ. ರಾಘವೇಂದ್ರ, ಮಧು ಬಂಗಾರಪ್ಪ, ಅನಂತಕುಮಾರ ಹೆಗಡೆ, ರಮೇಶ್ ಜಿಗಜಿಣಗಿ, ಪ್ರಹ್ಲಾದ್ ಜೋಶಿ ಸೇರಿದಂತೆ 237 ಅಭ್ಯರ್ಥಿಗಳದ್ದು 2.43 ಕೋಟಿ ಮತದಾರರು ಇವರ ಹಣೆಬರಹ ಬರೆಯಲಿದ್ದಾರೆ.

### ಫಲಿತಾಂಶಕ್ಕಾಗಿ 1 ತಿಂಗಳು ಕಾಯಲೇಬೇಕು

ಆದರೆ, ರಾಷ್ಟ್ರದಲ್ಲಿ ಇನ್ನೂ 4 ಹಂತದ ಮತದಾನ ಪ್ರಕ್ರಿಯೆ ಬಾಕಿ ಉಳಿಯಲಿದ್ದು ಎಲ್ಲ ಹಂತದ ಮತದಾನವೂ ಮುಗಿದ ನಂತರವೇ ಫಲಿತಾಂಶ ಹೊರಬೀಳಲಿದೆ. ಅಲ್ಲಿಯವರೆಗೆ ಅಭ್ಯರ್ಥಿಗಳ ಭವಿಷ್ಯವು ಸ್ಟ್ರಾಂಗ್ ರೂಮ್‌ನಲ್ಲಿನ ಮತಯಂತ್ರದಲ್ಲಿ ಭದ್ರವಾಗಿರಲಿದ್ದು, ಮೇ 23 ರಂದು ಮತ ಎಣಿಕೆ ಪ್ರಕ್ರಿಯೆ ಮುಗಿದ ಬಳಿಕ ಫಲಿತಾಂಶ ತಿಳಿಯಲಿದೆ.

# ಅತ್ಯಾಚಾರ ಪ್ರಕರಣ: ಸಿಐಡಿ ತನಿಖೆ ಚುರುಕು

**ರಾಯಚೂರು:** ನಗರದ ನವೋದಯ ಕಾಲೇಜಿನ ಇಂಜಿನಿಯರಿಂಗ್ ವಿದ್ಯಾರ್ಥಿನಿ ಅತ್ಯಾಚಾರ ಕೊಲೆ ಪ್ರಕರಣದ ತನಿಖೆ ಕೈಗೆತ್ತಿಕೊಂಡಿರುವ ಸಿಐಡಿ ಅಧಿಕಾರಿಗಳು ತನಿಖೆ ಚುರುಕುಗೊಳಿಸಿದ್ದಾರೆ.

ಸೋಮವಾರ ರಾಯಚೂರಿಗೆ ಭೇಟಿ ನೀಡಿ ಸ್ಥಳ ಪರಿಶೀಲನೆ ನಡೆಸಿರುವ ಸಿಐಡಿ ಎಸ್.ಪಿ ಶರಣಪ್ಪ ಮೃತಳ ಕುಟುಂಬಸ್ಥರಿಂದ ಮಾಹಿತಿ ಕಲೆ ಹಾಕುತ್ತೇವೆ. ಪ್ರಕರಣದ ಬಗ್ಗೆ ಯಾರಿಗಾದರೂ ಮಾಹಿತಿಯಿದ್ದರೆ ತಿಳಿಸಬಹುದು ಎಂದು ಹೇಳಿದ್ದಾರೆ. ಈಗ ಬೆಂಗಳೂರಿನಿಂದ ಮತ್ತೊಂದು ವಿಧಿ ವಿಜ್ಞಾನ ಪ್ರಯೋಗಾಲಯದ (ಎಫ್‌ಎಸ್‌ಎಲ್) ತಂಡ ಬಂದಿದ್ದು, ಘಟನೆ ಬಗ್ಗೆ ಸ್ವತಂತ್ರ ಮಟ್ಟಕ್ಕೆ ನಡೆಸಲಾಗುತ್ತದೆ. ಎಲ್ಲಾ ಆಯಾಮಗಳಿಂದಲೂ ಕೂಲಂಕುಷವಾಗಿ ತನಿಖೆ ನಡೆಸುತ್ತೇವೆ. ಪ್ರಕರಣದಲ್ಲಿ ಭಾಗಿಯಾದವರು ತನಿಖೆಯಲ್ಲಿ ತಿಳಿದು ಬರುತ್ತದೆ ಎಂದು ಶರಣಪ್ಪ ಹೇಳಿದ್ದಾರೆ. ಮೃತಳ ಶವ ಪತ್ತೆಯಾದ ಸ್ಥಳ ಪರಿಶೀಲನೆ ನಡೆಸಿದ ಶರಣಪ್ಪ ನಮ್ಮ ತಂಡ ನಗರದಲ್ಲಿ ಬೀಡು ಬಿಟ್ಟಿದೆ ಸಿಐಡಿ ಡಿವೈಎಸ್ಪಿ ರವಿಶಂಕರ, ಸಿಪಿಐ ದಿಲೀಪ್ ಕುಮಾರ ಸೇರಿದಂತೆ ನಾಲ್ಕು ಜನ ಅಧಿಕಾರಿಗಳ ತಂಡ ಭಾನುವಾರದಿಂದ ನಗರದಲ್ಲಿ ತನಿಖೆ ಆರಂಭಿಸಿದೆ. ಸೋಮವಾರ ನಗರಕ್ಕೆ ಭೇಟಿ ನೀಡಿರುವ ಸಿಐಡಿ ಡಿವೈಎಸ್ಪಿ ಶೀಲವಂತರಿಂದ ಮಾಹಿತಿ ಪಡೆದಿದ್ದಾರೆ.

## ರಾಮಬಾಣ

ಮತ ಹಾಕದೇ 'ಕ್ಷಮಿಸಿ' ಎಂದರೆ ಪ್ರಜಾಪ್ರಭುತ್ವ ಗಟ್ಟಿಯಾಗುವುದಿಲ್ಲ! ಓಟ್ ಮಾಡಿ...

'ಚೌಕಿದಾರ್ ಚೋರ್ ಹೈ' ಹೇಳಿಕೆ ಸುಪ್ರೀಂನಲ್ಲಿ ಕ್ಷಮೆ ಕೋರಿದ ರಾಹುಲ್

# ಉತ್ತರ ಕರ್ನಾಟಕದಲ್ಲೂ ಐಟಿ ದಾಳಿ

**ಬೆಳಗಾವಿ:** ಕೇಂದ್ರ ಆದಾಯ ತೆರಿಗೆ ಇಲಾಖೆಯ ಅಧಿಕಾರಿಗಳು ಸೋಮವಾರ ಬೆಳ್ಳಂಬೆಳಗ್ಗೆ ಬಿಜೆಪಿ ಅಭ್ಯರ್ಥಿಯ ಸಂಬಂಧಿಕರ ಮನೆಯ ಮೇಲೆ ದಾಳಿ ನಡೆಸಿದ್ದಾರೆ.

ಲೋಕಸಭಾ ಚುನಾವಣೆಗೆ ಒಂದು ದಿನ ಬಾಕಿ ಇರುವ ಬೆನ್ನಲ್ಲೇ ಬಿಜೆಪಿ ಜಿಲ್ಲಾ ಪ್ರಧಾನ ಕಾರ್ಯದರ್ಶಿ ಮನೆಯ ಮೇಲೆ ಆದಾಯ ತೆರಿಗೆ ಇಲಾಖೆಯ ಅಧಿಕಾರಿಗಳ ತಂಡ ಸೋಮವಾರ ಬೆಳ್ಳಂಬೆಳಗ್ಗೆ ದಾಳಿ ನಡೆಸಿದೆ. ಸಂಸದ ಸುರೇಶ ಅಂಗಡಿ ಅವರ ಸಂಬಂಧಿ ಎಂದು ಹೇಳಲಾಗುತ್ತಿರುವ ಬೆಳಗಾವಿ ತಾಲೂಕಿನ ಕೆ.ಕೆ.ಕೊಪ್ಪ ಗ್ರಾಮದ ಶಂಕರಗೌಡ ಪಾಟೀಲ ಎಂಬುವರ ಮನೆಯ ಮೇಲೆ ಹಾಗೂ ಫಾರಂ ಹೌಸ್ ಮೇಲೆ ಐಟಿ ದಾಳಿ ನಡೆದಿದೆ. ದಾಳಿ ವೇಳೆ 2 ಲಕ್ಷ ರೂ. ನಗದು ಹಾಗೂ 300 ಗ್ರಾಂ ಚಿನ್ನಾಭರಣ ಸೇರಿದಂತೆ ಪ್ರಮುಖ ಆಸ್ತಿ ಪತ್ರಗಳ ದಾಖಲೆಗಳನ್ನು ವಶಪಡಿಸಿಕೊಂಡು ಪರಿಶೀಲನೆ ನಡೆಸಿದ್ದಾರೆ ಎನ್ನಲಾಗಿದೆ.

### ಉದ್ಯಮಿಗೂ ತಟ್ಟಿದ ಬಿಸಿ

**ಧಾರವಾಡ:** ಉದ್ಯಮಿ ಗಿರೀಶ ಕುಲಕರ್ಣಿ ಮನೆ ಮೇಲೆ ಆದಾಯ ತೆರಿಗೆ ಇಲಾಖೆ ಅಧಿಕಾರಿಗಳು ಭಾನುವಾರ ರಾತ್ರಿ ದಾಳಿ ನಡೆಸಿ, ಸೋಮವಾರ ಬೆಳಗಿನವರೆಗೂ ತಪಾಸಣೆ ನಡೆಸಿದರು.

ಮಾಜಿ ಸಚಿವರೊಬ್ಬರ ಆಪ್ತ ವಲಯದಲ್ಲಿ ಗುರುತಿಸಿಕೊಂಡ ಗಿರೀಶ ಕುಲಕರ್ಣಿ ಹಲವು ವರ್ಷಗಳಿಂದ ರಿಯಲ್ ಎಸ್ಟೇಟ್ ವ್ಯವಹಾರದಲ್ಲಿ ತೊಡಗಿದ್ದರು. ಲೋಕಸಭಾ ಚುನಾವಣೆಯಲ್ಲಿ ಹಣದ ಹರಿವು ಖಚಿತ ಮಾಹಿತಿ ಮೇರೆಗೆ ಅಧಿಕಾರಿಗಳು ದಾಳಿ ನಡೆಸಿದ್ದಾರೆ. ಮೂರು ವಾಹನಗಳಲ್ಲಿ ಆಗಮಿಸಿದ ಅಧಿಕಾರಿಗಳು ತಪಾಸಣೆ ನಡೆಸಿ ಹಲವಾರು ಕಡತಗಳನ್ನು ಪರಿಶೀಲನೆ ನಡೆಸಿದ್ದಾರೆ.

### ವಿಳಾಸ ಸಿಗದೆ ಪರದಾಟ

**ರಾಯಚೂರು:** ಜಿಲ್ಲೆಯ ಬಿಜೆಪಿ ಮುಖಂಡ ಬಂಡೇಶ ವಲ್ಕಂದಿನ್ನಿ ಅವರ ಮನೆ ಮೇಲೆ ಐಟಿ ದಾಳಿ ನಡೆಸಲು ಹೋದ ಅಧಿಕಾರಿಗಳು ವಿಳಾಸ ಸಿಗದೆ ಕಕ್ಕಾಬಿಕ್ಕಿಯಾಗಿ ಜಹೀರಾಬಾದ್ ಬಡಾವಣೆಯ ಬೀದಿಯಲ್ಲೇ ಪರದಾಡಿದ್ದಾರೆ.

ಬಿಜೆಪಿ ಮುಖಂಡ ಬಂಡೇಶ್ ಅವರ ಮನೆಗೆ ದಾಳಿ ನಡೆಸಲು ಚುನಾವಣಾ ಐಟಿ ಅಧಿಕಾರಿಗಳು, ಫ್ಲೈಯಿಂಗ್ ಸ್ಕ್ವಾಡ್, ಸಹಾಯಕ ಆಯುಕ್ತ, ಜಿಪಂ ಸಿಇಒ ಅವರನ್ನೊಳಗೊಂಡ ತಂಡ ಮುಂದಾಗಿತ್ತು. ಐಟಿ ಅಧಿಕಾರಿಗಳಿಗೆ ವಿಳಾಸ ಪತ್ತೆ ಹಚ್ಚುವುದು ಕಷ್ಟವಾಗಿ ಸುಮಾರು ಹೊತ್ತು ರಸ್ತೆಯಲ್ಲಿ ಕಾದು ಮರಳಿ ಹೋಗಿದ್ದಾರೆ.

### ಭಯೋತ್ಪಾದನೆ ಎದುರಿಸಲು ದಿಟ್ಟ ಕ್ರಮ

ಮೇಕ್ ಇನ್ ಇಂಡಿಯಾ ಕಾರ್ಯಕ್ರಮ ದಲ್ಲಿ ತನ್ನ ಸರಕಾರ ರಕ್ಷಣಾ ಉತ್ಪಾದನೆಯನ್ನು ಹೆಚ್ಚಿಸಿದೆ ಎಂದರು.

ನಾಶಿಕ್, ದಿಂಡೋರಿ ಮತ್ತು ಧುಳೆ ಲೋಕಸಭಾ ಕ್ಷೇತ್ರಗಳಿಂದ ಸ್ಪರ್ಧಿಸಿರುವ ಬಿಜೆಪಿ - ಶಿವಸೇನಾ ಮೈತ್ರಿ ಅಭ್ಯರ್ಥಿಗಳ ಪರವಾಗಿ ಚುನಾವಣಾ ಪ್ರಚಾರ ನಡೆಸಿದ ಮೋದಿ, ಜನರು ಶಾಂತಿ ಸಂದೇಶವನ್ನು ಹಂಚಿಕೊಳ್ಳುತ್ತಿದ್ದ ಈಸ್ಟರ್ ದಿನದಂದು ಶ್ರೀಲಂಕಾ ಸ್ಫೋಟಗಳು ಸಂಭವಿಸಿದವು ಎಂದರು.

2014ರ ಮೊದಲು ಭಾರತದಲ್ಲಿ ಎಂತಹ ಪರಿಸ್ಥಿತಿ ಇತ್ತು ? ಮುಂಬೈ, ಪುಣೆ, ಹೈದರಾಬಾದ್, ಕಾಶಿ (ವಾರಾಣಸಿ), ಅಯೋಧ್ಯಾ , ಜಮ್ಮು ಸಹಿತ ದೇಶದ ಪ್ರತಿಯೊಂದು ಮೂಲೆಯಲ್ಲೂ ಬಾಂಬ್ ಸ್ಫೋಟಗಳಾಗುತ್ತಿದ್ದವು ಎಂದು ಮೋದಿ ನೆನಪಿಸಿದರು.

### ಪರಿಸರ ಪ್ರಶಸ್ತಿ ಆಯ್ಕೆ ಸಮಿತಿ ರಚನೆ

**ಬೆಂಗಳೂರು:** ವಿಶ್ವ ಪರಿಸರ ದಿನಾಚರಣೆ ಹಿನ್ನೆಲೆ 2018- 19ನೇ ಸಾಲಿನ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಅರ್ಹರನ್ನು ಆಯ್ಕೆ ಮಾಡಲು ಪರಿಸರ ಇಲಾಖೆಯ ಪ್ರಧಾನ ಕಾರ್ಯದರ್ಶಿ ಅಧ್ಯಕ್ಷತೆಯಲ್ಲಿ 8 ಸದಸ್ಯರನ್ನೊಳಗೊಂಡ ಸಮಿತಿ ರಚನೆಯಾಗಿದೆ.

ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆಯಿಂದ ಪ್ರತಿವರ್ಷ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ವ್ಯಕ್ತಿ ಹಾಗೂ ಸಂಸ್ಥೆಗಳಿಗೆ ತಲಾ 1 ಲಕ್ಷ ರೂ. ನಗದು, ಪ್ರಶಸ್ತಿ ಪ್ರಮಾಣ ಪತ್ರವನ್ನೊಳಗೊಂಡ ರಾಜ್ಯ ಪರಿಸರ ಪ್ರಶಸ್ತಿಗೆ ಅರ್ಹರನ್ನು ಆಯ್ಕೆ ಮಾಡಲು ಸಮಿತಿ ರಚಿಸಿದ್ದು 2018-19ನೇ ಸಾಲಿನ ಪರಿಸರ ಪ್ರಶಸ್ತಿಗೆ ಅರ್ಹ ವ್ಯಕ್ತಿ ಹಾಗೂ ಸಂಸ್ಥೆಗಳಿಂದ ಅರ್ಜಿ, ನಾಮನಿರ್ದೇಶನ ಮಾಡಬಹುದು.

ಮಲೆನಾಡು, ಕರಾವಳಿ ವಲಯ, ದಕ್ಷಿಣ ವಲಯ, ಉತ್ತರ ವಲಯವೆಂದು ಮೂರು ವಿಭಾಗಗಳನ್ನಾಗಿ ವಿಂಗಡಿಸಲಾಗಿದ್ದು, ಈ ವಲಯಗಳಲ್ಲಿ ತಲಾ ಒಬ್ಬ ವ್ಯಕ್ತಿ ಮತ್ತು ಒಂದು ಸಂಸ್ಥೆಗೆ ಪ್ರಶಸ್ತಿ ನೀಡಲಾಗುವುದು. ಅರ್ಜಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ , ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ, ಕೊಠಡಿ ಸಂಖ್ಯೆ 708, 7ನೇ ಮಹಡಿ, 4ನೇ ಹಂತ ಬೆಂಗಳೂರು - 560001 ವಿಳಾಸಕ್ಕೆ ಮೇ 15ರಂದು ಸಂಜೆ 5 ಗಂಟೆಯೊಳಗೆ ಸಲ್ಲಿಸಬೇಕು. ಹೆಚ್ಚಿನ ಮಾಹಿತಿಗೆ ದೂರವಾಣಿ ಸಂಖ್ಯೆ 080-22032275, 22032290 ಸಂಪರ್ಕಿಸಬಹುದು.

ಇಂಜಿನಿಯರ್ ಆಗಿದ್ದ ಪ್ರಶಾಂತ್ ಆಚಾರ್ಯ | ಉದ್ಯೋಗ ತೊರೆದು ಅಧ್ಯಾತ್ಮದೆಡೆಗೆ ಹೆಜ್ಜೆ

# ಪುತ್ತಿಗೆ ಮಠಕ್ಕೆ ಉತ್ತರಾಧಿಕಾರಿ ನೇಮಕ

**ಉಡುಪಿ:** ಉಡುಪಿಯ ಅಷ್ಟ ಮಠಗಳಲ್ಲೊಂದಾದ ಪುತ್ತಿಗೆ ಶ್ರೀ ಉಪೇಂದ್ರ ತೀರ್ಥ ಮಠದ 31ನೇ ಯತಿಗಳಾಗಿ ಶ್ರೀಸುಶ್ರೀಂದ್ರ ತೀರ್ಥರು ಸೋಮವಾರ ನಿಯುಕ್ತಿಗೊಂಡಿದ್ದಾರೆ.

ಉಡುಪಿ ನಗರದ ಕುಂಜಿಬೆಟ್ಟುವಿನ ಪ್ರಶಾಂತ ಆಚಾರ್ಯ ಅವರು ಸ್ವಯಂ ಇಚ್ಛೆಯಿಂದ ಪುತ್ತಿಗೆ ಮಠದ ಈಗಿನ ಯತಿ ಶ್ರೀಸುಗುಣೇಂದ್ರ ತೀರ್ಥರ ಶಿಷ್ಯತ್ವವನ್ನು ಸ್ವೀಕರಿಸಿ, ಸೋಮವಾರ ವಿಧಿವತ್ತಾಗಿ ಸನ್ಯಾಸಾಶ್ರಮ ಸ್ವೀಕರಿಸಿದರು. ಪುತ್ತಿಗೆ ಮಠದ ಕಿರಿಯ ಯತಿಗಳಾಗಿ ಪಟ್ಟಾಭಿಷೇಕಗೊಂಡು, ಶ್ರೀಸುಶ್ರೀಂದ್ರ ತೀರ್ಥ ಎಂಬ ನಾಮಧೇಯದಿಂದ ಶ್ರೀಸುಗುಣೇಂದ್ರ ತೀರ್ಥರ ಉತ್ತರಾಧಿಕಾರಿಯಾಗಿ ನೇಮಕಗೊಂಡರು.

ಶನಿವಾರದಿಂದಲೇ ಉಡುಪಿಯಿಂದ 20 ಕಿ.ಮೀ. ದೂರದ ಪುತ್ತಿಗೆ ಮೂಲಮಠದಲ್ಲಿ ಸನ್ಯಾಸ ಆಶ್ರಮ ಸ್ವೀಕಾರದ ಪೂರ್ವಭಾವಿ ಅನುಷ್ಠಾನ, ವಿರಜಾ ಹೋಮ, ಶಿಲಾ ಹೋಮ, ಕೂಷ್ಮಾಂಡ ಹೋಮ, ಪವಮಾನ ಹೋಮಗಳನ್ನು ನಡೆಸಲಾಯಿತು.

ಭಾನುವಾರ ಅಷ್ಟ ಶ್ರಾದ್ಧ ಸಹಿತ ಧಾರ್ಮಿಕ ಪ್ರಕ್ರಿಯೆಗಳು ನಡೆದಿದ್ದರೆ, ಸೋಮವಾರ ಪ್ರಣವ ಮಂತ್ರ ಬೋಧನ, ಸನ್ಯಾಸ ದೀಕ್ಷೆ, ನಾಮಕರಣ, ಪಟ್ಟಾಭಿಷೇಕವು ಚಿತ್ರಾಪುರ ಮಠದ ಶ್ರೀವಿದ್ಯೇಂದ್ರತೀರ್ಥರು ಹಾಗೂ ಪುತ್ತಿಗೆ ಮಠದ ಶಿಷ್ಯವರ್ಗದ ಉಪಸ್ಥಿತಿಯಲ್ಲಿ ನಡೆಯಿತು.

**ಆಶ್ರಮ ಗುರುಗಳಿಂದಲೇ ಶಾಸ್ತ್ರ ಪಾಠ:** ಶ್ರೀಸುಶ್ರೀಂದ್ರತೀರ್ಥರು (ಪ್ರಶಾಂತ ಆಚಾರ್ಯ) 29 ವರ್ಷ ವಯಸ್ಸಿನವರಾಗಿದ್ದು, ಸಾಫ್ಟ್‌ವೇರ್ ಇಂಜಿನಿಯರಿಂಗ್ ಪದವಿ ಪಡೆದಿದ್ದಾರೆ. ಮೂರು ವರ್ಷಗಳಿಂದ ಬೆಂಗಳೂರಿನ ಬಹುರಾಷ್ಟ್ರೀಯ ಕಂಪೆನಿಯೊಂದರಲ್ಲಿ ಟೀಂ ಲೀಡರ್ ಆಗಿ ವೃತ್ತಿ ನಡೆಸುತ್ತಿದ್ದರು. ಇದೀಗ ಯತಿಯಾಗಿ ಅಗತ್ಯ ಆಧ್ಯಾತ್ಮಿಕ ಶಿಕ್ಷಣವನ್ನು ಮುಂದುವರಿಸಲಿದ್ದಾರೆ. ಪುತ್ತಿಗೆ ಮಠದ ವಿದ್ಯಾಪೀಠದಲ್ಲಿ ಶ್ರೀಸುಗುಣೇಂದ್ರತೀರ್ಥ ಸ್ವಾಮೀಜಿ ಅವರಿಂದಲೇ ಶಾಸ್ತ್ರಾಭ್ಯಾಸ ನಡೆಸಲಿದ್ದಾರೆ.

**ವಿದೇಶಗಳಲ್ಲಿ 11 ಶಾಖಾ ಮಠಗಳು:** ಪುತ್ತಿಗೆ ಮಠದ 30ನೇ ಯತಿ ಶ್ರೀಸುಗುಣೇಂದ್ರತೀರ್ಥ ಸ್ವಾಮೀಜಿ ಅವರು ಕಳೆದೆರಡು ದಶಕಗಳಿಂದ ವಿದೇಶದಲ್ಲಿಯೂ ಧರ್ಮ ಪ್ರಚಾರದ ಕಾರ್ಯವನ್ನು ನಡೆಸುತ್ತಿದ್ದಾರೆ. ಪ್ರಸ್ತುತ ಪುತ್ತಿಗೆ ಶ್ರೀಉಪೇಂದ್ರತೀರ್ಥ ಮಠವು ಅಮೆರಿಕದಲ್ಲಿ 7, ಆಸ್ಟ್ರೇಲಿಯಾದಲ್ಲಿ 2, ಕೆನಡಾ, ಲಂಡನ್‌ನಲ್ಲಿ ತಲಾ 1 ಸೇರಿ ವಿದೇಶದಲ್ಲಿ ಒಟ್ಟು 11 ಶಾಖಾ ಮಠಗಳನ್ನು ಹೊಂದಿದೆ. ಧರ್ಮ ಪ್ರಚಾರದ ಭಾಗವಾಗಿ ಆಗಾಗ ವಿದೇಶಕ್ಕೆ ತೆರಳುವ ಪುತ್ತಿಗೆ ಶ್ರೀಗಳು 182 ರಾಷ್ಟ್ರಗಳು ಸದಸ್ಯತ್ವ ಹೊಂದಿರುವ ಅಂತಾರಾಷ್ಟ್ರೀಯ ಧರ್ಮ, ಶಾಂತಿ ಸಂಸ್ಥೆಯ ಅಧ್ಯಕ್ಷರಾಗಿದ್ದಾರೆ. ಮುಂದೆ ಉಭಯ ಯತಿಗಳು ಏಕ ಸಮುಚ್ಚಯದಿಂದ ಧರ್ಮ ಪ್ರಸಾರದ ಕಾರ್ಯದಲ್ಲಿ ತೊಡಗಿಸಿಕೊಳ್ಳುವುದಾಗಿ ತಿಳಿಸಿದ್ದಾರೆ.

# ಭೀಕರ ಅಪಘಾತ: ಬೆಂಗಳೂರಿನ ಮೂವರು ವಿದ್ಯಾರ್ಥಿಗಳು ಸಾವು

**ಚಿತ್ರದುರ್ಗ:** ಟೈಯರ್ ಪಂಚರ್ ಆಗಿ ರಸ್ತೆ ಬದಿಯಲ್ಲಿ ನಿಂತಿದ್ದ ಟೆಂಪೋ ಟ್ರಾವೆಲರ್ ವಾಹನಕ್ಕೆ ಲಾರಿ ಡಿಕ್ಕಿ ಹೊಡೆದ ಪರಿಣಾಮ ಸ್ಥಳದಲ್ಲೇ ಮೂವರು ಮೃತಪಟ್ಟಿದ್ದು ಐವರು ಗಾಯಗೊಂಡಿರುವ ಘಟನೆ ಸೋಮವಾರ ಬೆಳಗಿನ ಜಾವ 4 ಗಂಟೆ ಸುಮಾರಿಗೆ ಚಿತ್ರದುರ್ಗ ನಗರದ ಬಳಿ ನಡೆದಿದೆ. ನಗರದ ಹೊರವಲಯದಲ್ಲಿರುವ ರೇಷ್ಮೆ ಇಲಾಖೆ ಕಚೇರಿ ಸಮೀಪದ ರಾಷ್ಟ್ರೀಯ ಹೆದ್ದಾರಿ 4 ರಲ್ಲಿ ಅಪಘಾತ ಸಂಭವಿಸಿದ್ದು, ಮೃತರು ಬೆಂಗಳೂರಿನ ವಿಜಯ ಕಾಲೇಜು ವಿದ್ಯಾರ್ಥಿಗಳು ಎಂದು ತಿಳಿದುಬಂದಿದೆ. ಪಿ.ಯು.ಸಿ. ವಿದ್ಯಾರ್ಥಿಗಳಾದ ಹರ್ಷ, ಶ್ರೀನಿ ಹಾಗೂ ಕಾರ್ತಿಕ್ ಮೃತ ದುರ್ದೈವಿಗಳು. ಗಾಯಾಳುಗಳು ಚಿತ್ರದುರ್ಗ ಜಿಲ್ಲಾಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ.

ವಿಜಯ ಕಾಲೇಜಿನ 14 ಮಂದಿ ಪಿ.ಯು.ಸಿ. ವಿದ್ಯಾರ್ಥಿಗಳು ಟೆಂಪೋ ಟ್ರಾವೆಲರ್‌ನಲ್ಲಿ ಗೋಕರ್ಣ ಪ್ರವಾಸ ಮುಗಿಸಿ ಬೆಂಗಳೂರಿಗೆ ಹಿಂದಿರುಗುತ್ತಿದ್ದರು. ಈ ವೇಳೆ ಟೆಂಪೋ ಟ್ರಾವೆಲರ್ ಟೈಯರ್ ಪಂಚರ್ ಆಗಿದೆ. ಕೂಡಲೇ ವಾಹನವನ್ನು ರಸ್ತೆ ಪಕ್ಕದಲ್ಲಿ ನಿಲ್ಲಿಸಿದ ಚಾಲಕ, ಇಬ್ಬರು ವಿದ್ಯಾರ್ಥಿಗಳ ಜೊತೆ ಪಂಚರ್ ಹಾಕ್‌ಗೆ ತೆರಳಿದ್ದಾನೆ. ಇದೇ ಸಂದರ್ಭದಲ್ಲಿ ಬಂದ ಲಾರಿ ಚಾಲಕ ನಿದ್ದೆ ಮಂಪರಿನಲ್ಲಿ ಟಿಟಿ ವಾಹನಕ್ಕೆ ಡಿಕ್ಕಿ ಹೊಡೆದಿದ್ದಾನೆ. ಲಾರಿ ಡಿಕ್ಕಿ ಹೊಡೆದ ರಭಸಕ್ಕೆ ಟಿಟಿ ವಾಹನ ಅದೇ ಮಾರ್ಗವಾಗಿ ತೆರಳುತ್ತಿದ್ದ ಮತ್ತೊಂದು ಕಾರಿಗೆ ಡಿಕ್ಕಿ ಹೊಡೆದು, ಕಾರು ಕೂಡ ಜಖಂಗೊಂಡಿದೆ. ಸದ್ಯ ಕಾರಿನಲ್ಲಿದ್ದವರು ಪವಾಡ ಸದೃಶ ರೀತಿಯಲ್ಲಿ ಪಾರಾಗಿದ್ದಾರೆ. ಮೃತ ದೇಹಗಳನ್ನು ಜಿಲ್ಲಾಸ್ಪತ್ರೆ ಶವಾಗಾರಕ್ಕೆ ರವಾನಿಸಲಾಗಿದ್ದು, ಸಂಚಾರಿ ಠಾಣೆಯಲ್ಲಿ ಈ ಸಂಬಂಧ ಪ್ರಕರಣ ದಾಖಲಾಗಿದೆ.

# ಸಂಪಾದಕೀಯ

## ಶ್ರೀಲಂಕಾದಲ್ಲಿ ಮಾರಣಹೋಮ!

ನೆರೆಯ ಶ್ರೀಲಂಕಾದಲ್ಲಿ ಮತ್ತೆ ಶಾಂತಿ ಕದಡಿದೆ. 2009ರಲ್ಲಿ ಎಲ್‌ಟಿಟಿಇಯನ್ನು ನಿರ್ನಾಮ ಮಾಡಿದ ಬಳಿಕ ಶ್ರೀಲಂಕಾ ಬಹುತೇಕ ಶಾಂತವಾಗಿತ್ತು. ಆದರೆ ಭಾನುವಾರ ಲಂಕಾದಲ್ಲಿ ಸಂಭವಿಸಿದ ಸರಣಿ ಬಾಂಬು ಸ್ಫೋಟಗಳು ಮತ್ತೆ ಶಾಂತಿಯನ್ನು ಕದಡಿವೆ. ಎಂಟು ಕಡೆ ಸಂಭವಿಸಿದ ಸ್ಫೋಟಗಳಲ್ಲಿ 290 ಜನ ಸಾವಿಗೀಡಾಗಿದ್ದು, 500ಕ್ಕೂ ಅಧಿಕ ಮಂದಿ ಗಾಯಗೊಂಡಿದ್ದಾರೆ. ಈ ದಾಳಿಯು ಮುಖ್ಯವಾಗಿ ಕ್ರೈಸ್ತರನ್ನು ಗುರಿಯಾಗಿಸಿಕೊಂಡು ನಡೆದಿದೆ. ಕ್ರೈಸ್ತರು ಈಸ್ಟರ್ ಹಬ್ಬದ ಸಂಭ್ರಮದಲ್ಲಿ ಮುಳುಗಿರುವಾಗಲೇ ಈ ದಾಳಿ ನಡೆದಿದ್ದು ಕೆಲವು ಚರ್ಚ್‌ಗಳು ಹಾಗೂ ಲಕ್ಸುರಿ ಹೋಟೆಲ್‌ಗಳು ದಾಳಿಗೆ ಗುರಿಯಾಗಿವೆ. ಮೃತರಲ್ಲಿ ಕ್ರೈಸ್ತರೇ ಅಧಿಕ. ಜೊತೆಗೆ ಕೆಲವು ವಿದೇಶಿಯರೂ ಸಾವನ್ನಪ್ಪಿದ್ದಾರೆ. ಇನ್ನೂ ಕೆಲವು ಸ್ಫೋಟಗೊಳ್ಳದ ಸಜೀವ ಬಾಂಬ್‌ಗಳೂ ಪತ್ತೆಯಾಗಿದ್ದು, ವಿಧ್ವಂಸಕ ಕೃತ್ಯದ ವ್ಯಾಪಕತೆ ದಿಗ್ಭ್ರಮೆ ಹುಟ್ಟಿಸುವಂತಿದೆ. ಭಯೋತ್ಪಾದಕರು ಇನ್ನೂ ದೊಡ್ಡ ಮಟ್ಟದಲ್ಲಿ ವಿಧ್ವಂಸಕ ಕೃತ್ಯಗಳನ್ನೆಸಗಲು ಯೋಜಿಸಿದ್ದರೆಂಬ ಅನುಮಾನಗಳು ಇದರಿಂದ ಮೂಡುತ್ತಿವೆ.

ಬಾಂಬು ಸ್ಫೋಟಗಳು ಶ್ರೀಲಂಕಾಕ್ಕೇನೂ ಹೊಸತಲ್ಲ. ಈ ಹಿಂದೆ ಎಲ್‌ಟಿಟಿಇಯಿಂದ ಸಾಕಷ್ಟು ಇಂತಹ ಬಾಂಬು ಸ್ಫೋಟಗಳು ಹಾಗೂ ಇನ್ನಿತರ ಭಯೋತ್ಪಾದಕ ಕೃತ್ಯಗಳು ನಡೆದಿವೆ. ಆದರೆ ಈಗ ನಡೆದಿರುವ ಭಯೋತ್ಪಾದಕ ಕೃತ್ಯವು ಬೇರೆಯೇ ತೆರನಾದುದು. ಇದು 'ಇಸ್ಲಾಮಿಕ್ ಭಯೋತ್ಪಾದನೆ' ಎಂಬುದಾಗಿ ಶಂಕೆ ಪಡಲಾಗಿದೆ. ಶ್ರೀಲಂಕಾದಲ್ಲಿ ಕಾರ್ಯಾಚರಿಸುತ್ತಿರುವ ನ್ಯಾಷನಲ್ ತೌಹೀತ್ ಜಮಾತ್ (ಎನ್‌ಟಿಜೆ) ಎಂಬ ಮುಸ್ಲಿಂ ಮೂಲಭೂತವಾದಿ ಸಂಘಟನೆಯ ಮೇಲೆ ಪ್ರಧಾನ ಅನುಮಾನವು ಮೂಡಿದೆ. ಕಳೆದ ವರ್ಷ ಶ್ರೀಲಂಕಾದಲ್ಲಿ ನಡೆದ ಬೌದ್ಧ ಮೂರ್ತಿಗಳ ಧ್ವಂಸ ಪ್ರಕರಣದಲ್ಲಿ ಇದೇ ಸಂಘಟನೆಯ ಪಾತ್ರವಿತ್ತು. ಈ ಬಾರಿ ಅದು ಕೆಲವು ಚರ್ಚ್‌ಗಳನ್ನು ಗುರಿಯಾಗಿಸಿ ಬಾಂಬ್ ಸ್ಫೋಟ ನಡೆಸುವ ಸಾಧ್ಯತೆ ಇದೆ ಎಂಬ ಗುಪ್ತಚರ ಮಾಹಿತಿಯು ಕೆಲವು ದಿನಗಳ ಹಿಂದಷ್ಟೆ ಸರಕಾರಕ್ಕೆ ತಲುಪಿತ್ತು ಎನ್ನಲಾಗಿದೆ. ಆದರೆ ಕೇವಲ ಈ ಸಂಘಟನೆಯಿಂದ ಇಷ್ಟು ವ್ಯಾಪಕ ಪ್ರಮಾಣದಲ್ಲಿ ಸ್ಫೋಟಗಳನ್ನು ನಡೆಸುವುದು ಕಷ್ಟವಾಗಿದ್ದು, ಈ ಸಂಘಟನೆಗೆ ಅಂತಾರಾಷ್ಟ್ರೀಯ ಭಯೋತ್ಪಾದಕ ಸಂಘಟನೆಯ ಸಹಕಾರ ದೊರಕಿದೆ ಎಂಬುದಾಗಿ ಶ್ರೀಲಂಕಾ ಸರಕಾರವು ಇದೀಗ ಹೇಳಿದೆ. ಇದು ಶ್ರೀಲಂಕಾದ ಪಾಲಿಗೆ ನಿಜಕ್ಕೂ ಅಪಾಯಕಾರಿ ಸಂದೇಶವೇ ಸರಿ. ಎಲ್‌ಟಿಟಿಇ ಪ್ರೇರಿತ ಭಯೋತ್ಪಾದನೆಯು ದೇಶವನ್ನು ಜರ್ಜರಿತಗೊಳಿಸಿದ್ದು ದಶಕದ ಹಿಂದಷ್ಟೆ ಅದರಿಂದ ಮುಕ್ತಿ ಪಡೆಯಲಾಗಿತ್ತು. ಇದೀಗ ಭಯೋತ್ಪಾದನೆಯು ಮತ್ತೆ ಹೊಸ ರೂಪದಲ್ಲಿ ತಲೆ ಎತ್ತಿರುವುದು ಲಂಕಾ ಸರಕಾರದ ಹಾಗೂ ಜನರ ನೆಮ್ಮದಿ ಕೆಡಿಸುವುದರಲ್ಲಿ ಅನುಮಾನವಿಲ್ಲ. ಇಂತಹ ಭಯೋತ್ಪಾದನೆಯನ್ನು ಮೊಗ್ಗಿನಲ್ಲೇ ಚಿವುಟಿ ಹಾಕುವ ಕೃತ್ಯದಲ್ಲಿ ಲಂಕಾ ಆಡಳಿತವು ತೊಡಗಿಕೊಳ್ಳಬೇಕು. ಭಾರತವೂ ಈ ನಿಟ್ಟಿನಲ್ಲಿ ತನ್ನ ಸಹಕಾರ ಇದೆಯೆಂದು ಹೇಳಿದ್ದು, ಅಂತಾರಾಷ್ಟ್ರೀಯ ನೆರವನ್ನು ಪಡೆಯಲು ಲಂಕಾವು ಹಿಂಜರಿಯಬಾರದು.

## ನೋಡಿದವ ನೋಡುತ್ತಲೇ ಉಳಿದ

ಕೇಳಿದಳು ತಂದೆಯು ಈ ಮಾತನ್ನು ರೂಪಲತೆ. ಕಂಡಳು? ಚಿತ್ರದಲ್ಲಿ ಆ ದೊರೆಯನ್ನು. ಉತ್ಕಂಠಿತಳಾದಳು ಅವಳು. ಇನ್ನೇನು ಕೇಳಲೂ ಇಲ್ಲ, ಕಾಣಲೂ ಇಲ್ಲ, ಮನ್ಮಥನಿಗೆ ಮೋಹಿತಳಾದ ಮಗಳನ್ನು ಕಂಡ ದೊರೆ. ಚಿತ್ರಕಾರ ಕುಮಾರಿದತ್ತನಿಗೆಂದ ರೂಪಧರ-

'ನೀನು ಚಿತ್ರಿಸಿದ ನನ್ನ ಮಗಳ ಚಿತ್ರಕ್ಕೆ ಮರುಮಾತಿಲ್ಲ, ಇವಳ ರೂಪಕ್ಕೆ ಸಮಾನನಾಗಿದ್ದಾನೆ ಆ ಪೃಥ್ವೀರೂಪ ದೊರೆ. ಅವನೇ ಇವಳ ಪತಿಯಾಗಲು ಯೋಗ್ಯ. ಹಾಗಾಗಿ ಕೊಂಡೊಯ್ದು ನನ್ನ ಮಗಳ ಚಿತ್ರಪಟವನ್ನು ಕೊಡಬೇಕು. ಹೋಗಿ ತೋರಿಸು ಪೃಥ್ವೀರೂಪ ದೊರೆಗೆ. ತಿಳಿಸು ಅವನಿಗೆ ನಡೆದದ್ದನ್ನು. ಬರಲಿ ಅವನು ಇಲ್ಲಿಗೆ. ಒಪ್ಪಿಗೆಯಾದರೆ ಇದು ಅವನಿಗೆ. ಕ್ಷಿಪ್ರವಾಗಿ ನನ್ನ ಮಗಳನ್ನು ಮದುವೆಯಾಗಲು.'

ಹೀಗೆಂದ ದೊರೆ ಪೂಜಿಸಿದ ಅವರನ್ನು ಅವನೊಂದಿಗಿದ್ದ ಭಿಕ್ಷುಗಳನ್ನು, ಧನವಿತ್ತ ಚಿತ್ರಕಾರನಿಗೆ. ಕಳುಹಿಸಿಕೊಟ್ಟ ಅವರೆಲ್ಲರನ್ನು ಜೊತೆಗೆ ತನ್ನೊಬ್ಬ ದೂತನನ್ನು. ಹೊರಟರವರು. ದಾಟಿದರು ಸಮುದ್ರವನ್ನು ಪ್ರಯಾಣ ಬೆಳೆಸಿ ತಲುಪಿದರು ಪ್ರತಿಷ್ಠಾನವನ್ನು. ರಾಜನ ಬಳಿ ಹೋದರು.

• ಜಗದೀಶ ಶರ್ಮಾ
ಸರಿತ್ಸಾಗರ 349

ಸಾಧಿಸಿದ ಕಾರ್ಯವನ್ನು ಅರುಹಿದರು. ರೂಪಧರನ ಸಂದೇಶವನ್ನು ನಿವೇದಿಸಿದರು. ತೋರಿಸಿದ ಚಿತ್ರಕಾರ ಕುಮಾರಿದತ್ತ, ಚಿತ್ರದಲ್ಲಿದ್ದ ರೂಪಲತೆಯನ್ನು ದೊರೆಗೆ. ಲಾವಣ್ಯದ ಸರೋವರದಂತಿದ್ದ ಅವಳ ದೇಹದಲ್ಲಿ ನೆಟ್ಟ ತನ್ನ ದೃಷ್ಟಿಯನ್ನು ಹಿಂದೆಗೆಯದಾದ ದೊರೆ. ಕಾಂತಿಯ ಸುಧೆಯನ್ನು ಹರಿಸುತ್ತಿದ್ದ ಅವಳ ಸೌಂದರ್ಯವನ್ನು ಆಸ್ವಾದಿಸುತ್ತಿದ್ದ ದೊರೆಗೆ ತೃಪ್ತಿಯೇ ಆಗಲಿಲ್ಲ. ಬೆಳದಿಂಗಳ ಕಂಡ ಚಕೋರದಂತೆ ಆ ಕಪಾಯಿಸಿ ಅವನ ಉತ್ಕಟತೆ.

ನುಡಿದನವ ಚಿತ್ರಕಾರನಿಗೆ-

'ಗೆಳೆಯ, ಬ್ರಹ್ಮನಿಗೂ ನಿನ್ನ ಕೈಗಳಿಗೂ ವಂದಿಸಲೇಬೇಕು. ಇಂತಹ ರೂಪವನ್ನು ನಿರ್ಮಿಸಿದಕ್ಕೆ ಅವನಿಗೆ. ಅದನ್ನು ಚಿತ್ರಿಸಿದ್ದಕ್ಕೆ ನಿನಗೆ. ಸ್ವೀಕರಿಸಿದ್ದೇನೆ ನಾನು ರೂಪಧರ ಭೂಪತಿಯ ಮಾತು. ತೆರಳುತ್ತೇನೆ ಮುಕ್ತಿಪುರ ದ್ವೀಪಕ್ಕೆ. ವಿವಾಹವಾಗುತ್ತೇನೆ ಅವಳ ಮಗಳನ್ನು.'

ಹೀಗೆಂದವ ಸನ್ಮಾನಿಸಿದ ಸಂಪತ್ತಿನಿಂದ, ಚಿತ್ರಕಾರ, ದೂತ, ಭಿಕ್ಷುಗಳನ್ನು.

ಚಿತ್ರಪಟವನ್ನೇ ನೋಡುತ್ತಾ ಕುಳಿತ. ಉದ್ಯಾನಕ್ಕೂ ಕೊಂಡೊಯ್ದು ಅದನ್ನೇ. ವಿರಹಾತುರನಾಗಿಯೇ ಕಳೆದ ಆ ದಿನವನ್ನು. ನಿಶ್ಚಯಿಸಿದ ಹೊರಡುವ ಮುಹೂರ್ತವನ್ನು.

ಮಾರನೇ ದಿನ. ಹಲವು ಆನೆ ಕುದುರೆಗಳನ್ನು ಜೊತೆಯಾಗಿಸಿಕೊಂಡ. ಹೊರಟರು ಅವನೊಂದಿಗೆ ಸಾಮಂತರು ಮತ್ತು ರಾಜಕುಮಾರರು. ಹೊರಟರು ರೂಪಧರನ ದೂತ, ಚಿತ್ರಕಾರ, ಶ್ರಮಣರು. ಏರಿದ ದೊರೆ ಮಂಗಲಪಟು ಎನ್ನುವ ಗಜರಾಜನನ್ನು.

ಪ್ರಯಾಣಿಸಿದ ಹಗಲೆಲ್ಲ, ರಾತ್ರಿಯಾಗುತ್ತಿದ್ದರಲ್ಲಿ ವಿಂಧ್ಯಾಟವಿಯ ದ್ವಾರ ತಲುಪಿದ್ದ ವಸತಿ ಮಾಡಿದ ಅಂದು ಅಲ್ಲೇ.

ಎರಡನೆಯ ದಿನ. ಏರಿದ ಶತ್ರುಮರ್ದನ ಎಂಬ ಹೆಸರಿನ ಆನೆಯನ್ನು, ಪ್ರವೇಶಿಸಿದ ದೊರೆ ಪೃಥ್ವೀರೂಪ ಕಾಡನ್ನು. ಇದ್ದಕ್ಕಿದ್ದಂತೆ ಓಡತೊಡಗಿತು ಅವನಿಗಿಂತ ಮುಂದೆ ಸಾಗುತ್ತಿದ್ದ ಅವನ ಸೈನ್ಯ. ಇದೇನೆಂದು ಭ್ರಾಂತಿಗೊಂಡನವ.

ನುಡಿದನಾಗ ಆನೆಯ ಮೇಲಿದ್ದ ರಾಜಕುಮಾರ. ನಿರ್ಭಯನೆನ್ನುವವ-

'ದೇವ, ಮುಂದೆ ಆಕ್ರಮಣ ಮಾಡಿತು ಬಹುದೊಡ್ಡ ಭಿಲ್ಲರ ಸೇನೆ. ಯುದ್ಧದಲ್ಲಿ ಕೊಂದರು ಅವರು. ನಮ್ಮ ಐವತ್ತು ಆನೆಯನ್ನು ಸಾವಿರ ಪದಾತಿಗಳನ್ನು, ಮುನ್ನೂರು ಕುದುರೆಗಳನ್ನು. ನಮ್ಮವರೂ ಕೊಂದರು ಎರಡು ಸಾವಿರ ಬೇಡರನ್ನು. ನಮ್ಮ ಸೈನ್ಯದಲ್ಲಿ ಒಂದು ಪಟ್ಟು ಜನ ಸತ್ತರೆ ಅಲ್ಲಿ ಎರಡು ಪಟ್ಟು ಜನ ಸತ್ತರು. ಆಗ ದಾಳಿ ಮಾಡಿದರು ಅವರು ಘೋರವಾಗಿ. ಪೀಡಿತರಾದರು ನಮ್ಮ ಸೈನಿಕರು ಅವರ ಬಾಣಗಳಿಂದ.'

ಬದಲಾವಣೆ ಜಗದ ನಿಯಮ. ಅದೇ ರೀತಿ ಜನರು ಕೂಡಾ ಬದಲಾಗಿದ್ದಾರೆ. ನರೇಂದ್ರನೆನ್ನುವ ಜನಪ್ರಿಯ ನಾಯಕನ ಭಯದಿಂದ ನಾವೆಲ್ಲಿ ಧೂಳೀಪಟವಾಗಿಬಿಡುತ್ತೇವೋ ಎನ್ನುವ ಭಯದಲ್ಲಿ ರಾಜಕುಟುಂಬ ಇನ್ನೊಂದು ಕುಟುಂಬದೊಂದಿಗೆ ಕೈ ಜೋಡಿಸಿದ್ದು ಕೂಡಾ ತಪ್ಪಲ್ಲ ಎಂದಿತು ಬೇತಾಳ.

# ವಿಕ್ರಮ-ಬೇತಾಳ ಮತ್ತು ಕೈ ಚಿಹ್ನೆ

ಹುಳಿಮಾವು
ಪ್ರವೀಣ್ ಕುಮಾರ್ ಮಾವಿನಕಾಡು
mkpraveen79@gmail.com

ಛಲ ಬಿಡದ ವಿಕ್ರಮ ಚೈತ್ರ ಮಾಸದ ಅಮಾವಾಸ್ಯೆಯ ಆ ರಾತ್ರಿ ಮತ್ತೆ ಸ್ಮಶಾನಕ್ಕೆ ಹೋಗಿ ಬೇತಾಳವನ್ನು ಹೆಗಲಿಗೇರಿಸಿಕೊಂಡು ಖಡ್ಗವನ್ನು ಕೈಯಲ್ಲಿ ಹಿಡಿದು ನಡೆಯತೊಡಗಿದ. ವಿಕ್ರಮನ ಛಲದಿಂದ ಬೇತಾಳ ಪ್ರತೀ ಸಾರಿಯಂತೆ ಮತ್ತೊಂದು ಹೊಸಾ ಕಥೆ ಹೇಳಲು ಶುರು ಮಾಡಿತು.

ರಾಜಾ ವಿಕ್ರಮಾ, ಭಾರತ ದೇಶದೊಳು ಮಹಾ ರಾಣಿಯಾಗಿ ಮೆರೆಯುತ್ತಿದ್ದ ಇಂದಿರಾ ಎನ್ನುವ ಹೆಣ್ಣುಮಗಳು ಜೋಡೆತ್ತುಗಳನ್ನು ತನ್ನ ರಾಜಚಿಹ್ನೆಯನ್ನಾಗಿ ಮಾಡಿಕೊಂಡು ತನ್ನಿಷ್ಟದಂತೆ ಆಡಳಿತ ನಡೆಸುತ್ತಾ ಸುಖ ಸಂತೋಷದಿಂದ ಬಾಳುತ್ತಿದ್ದಳು. ನಂತರ ಮುಗ್ಧ ರೈತ ಕುಟುಂಬಗಳನ್ನು ಒಲೈಸಲು ಆಕೆ ಹಸು-ಕರು ಚಿಹ್ನೆಯನ್ನು ತನ್ನ ರಾಜಚಿಹ್ನೆಯನ್ನಾಗಿ ಮಾಡಿಕೊಂಡಳು. ಆದರೆ ಪ್ರಜೆಗಳೆಲ್ಲರೂ ಹಸು-ಕರು ಎಂದರೆ ಆಕೆ ಮತ್ತು ಆಕೆಯ ಪುತ್ರ ಸಂಜಯ ಎಂದೇ ಆಡಿಕೊಳ್ಳತೊಡಗಿದಾಗ, ತನ್ನನ್ನು ಆಡಿಕೊಳ್ಳುವ ಈ ಜನರಿಗೆ ಜೀವನ ಪೂರ್ತಿ ನೆನಪಿಟ್ಟುಕೊಳ್ಳುವಂತೆ ಕೈ ಕೊಡಬೇಕು ಎಂದು ಯೋಚಿಸುತ್ತಿರುವಾಗಲೇ ಕೈ ಚಿಹ್ನೆಯನ್ನೇ ತನ್ನ ರಾಜ ಚಿಹ್ನೆಯನ್ನಾಗಿ ಮಾಡಿಕೊಳ್ಳಬೇಕೆನ್ನುವ ಉಪಾಯ ಹೊಳೆಯಿತು. ಅಂದಿನಿಂದ ಆಕೆಯ ವಂಶಸ್ಥರು ಕೈ ಚಿಹ್ನೆಯನ್ನೇ ತಮ್ಮ ರಾಜಚಿಹ್ನೆಯನ್ನಾಗಿ ಮಾಡಿಕೊಂಡು ತಮ್ಮ ಪ್ರಜೆಗಳಿಗೆ ಕೈ ಕೊಡುತ್ತಾ ಓಡಾಡತೊಡಗಿದರು.

ವಿಕ್ರಮಾ,ಕೇಳಿಸಿಕೊಳ್ಳುತ್ತಿರುವೆ ತಾನೇ? ನಾನೊಬ್ಬನೇ ಮಾತನಾಡಿದರೆ ಹೇಗೆ? ಕಥೆ ಹೇಳುತ್ತಿರುವೆ. ಕೊನೆಯಪಕ್ಷ ಹೂಮ್ಮ್ ಹೂಮ್ಮ್.. ಅಂತಾದರೂ ಹೇಳಬಾರದೇ? ಎಂದಿತು.

ವಿಕ್ರಮ, ಕೇಳಿಸಿಕೊಳ್ಳುತ್ತಿರುವೆ ಎನ್ನುವಂತೆ ತಲೆಯಾಡಿಸಿ, ಸಣ್ಣಗೆ ನಗುತ್ತಾ ಮುಂದೆ ನಡೆಯತೊಡಗಿದ.

ಸರಿ ರಾಜಾ,ಮಾತಾಡಲು ಇಷ್ಟವಿಲ್ಲದಿದ್ದಲ್ಲಿ ಬೇಡ,ಕಥೆಯನ್ನಾದರೂ ಪೂರ್ತಿಯಾಗಿ ಕೇಳಿಸಿಕೋ ಎಂದು ಹೇಳಿ ತಾನು ಹೇಳುತ್ತಿದ್ದ ಕಥೆಯನ್ನು ಮುಂದುವರಿಸಿತು.

ಆ ನಂತರ ಅನಕ್ಷರಸ್ಥರು,ಅಲ್ಪಸಂಖ್ಯಾತರು ಮುಂತಾದವರಿಗೆ ಕೈ ಚಿಹ್ನೆಯನ್ನು ಹೊರತುಪಡಿಸಿ ಬೇರೆ ರಾಜಚಿಹ್ನೆಗಳು ಇವೆ ಎನ್ನುವುದೇ ಮರೆಸಿದ ಬಗೆಯನ್ನು ವಿವರಿಸಿದ ಬೇತಾಳ ಮಾತು ಮುಂದುವರಿಸಿತು. ಹೀಗೆ ಕೈ ಚಿಹ್ನೆಯನ್ನು ಹೊರತುಪಡಿಸಿ ಬೇರೆ ಚಿಹ್ನೆಗಳ ಎನ್ನುವುದೇ ಮರೆತಿದ್ದ ಒಂದು ಕಾಲವೂ ಬದಲಾಗುವಾಗಲೇ ಮತ್ತೊಂದು ಚುನಾವಣೆ ಬಂದಿತು. ಬಹುತೇಕ ತಿಳುವಳಿಕೆಯುಳ್ಳ ಪ್ರಜೆಗಳು ನರೇಂದ್ರನೆನ್ನುವ ಹೊಸಾ ನಾಯಕನ ಚಿಹ್ನೆಗೆ ಮತ ಹಾಕಲು ನಿರ್ಧರಿಸಿದ್ದರು. ಆದರೆ ಹಿಂದೊಂದು ಕಾಲದಲ್ಲಿ ಮಹಾರಾಣಿ ಇಂದಿರಾ ಬಂದು ನಿಂತಿದ್ದ ಸಣ್ಣಮಗಳೂರು ಎನ್ನುವ ಪ್ರಾಂತ್ಯದ ಕುಗ್ರಾಮವೊಂದರಲ್ಲಿ ವಯೋಸಹಜ ಖಾಯಿಲೆಗಳಿಂದ ಹಾಸಿಗೆ ಹಿಡಿದಿದ್ದ ಅಜ್ಜಿಯೊಬ್ಬಳಿಗೆ ಇವ್ಯಾವುದರ ಪರಿವೇ ಇರಲಿಲ್ಲ. ಚುನಾವಣೆಯ ವಿಷಯ ಕೇಳಿದ ಆ ಅಜ್ಜಿ ತಾನು ಮಲಗಿದ್ದಲ್ಲಿಂದಲೇ ಕೈ ನಡುಗಿಸುತ್ತಾ ಮೇಲೆತ್ತಿ ತನ್ನ ಮೊಮ್ಮಗನನ್ನು ಹತ್ತಿರಕ್ಕೆ ಕರೆದಳು. ಏನೆಂದು ಕೇಳಲು ಆಕೆಯ ಹತ್ತಿರಕ್ಕೆ ಹೋದ ಮೊಮ್ಮಗನಿಗೆ ನನ್ನ ಕೊನೆ ಆಸೆಯನ್ನು ನೆರವೇರಿಸಲು ಸಹಾಯ ಮಾಡುತ್ತೀಯಾ ಮಗಾ.. ಎಂದು ಕೇಳಿದಳು.

ಪ್ರಾಣ ಬಿಡೋಕೂ ಮುಂಚೆ ಕೊನೇ ಸಾರಿ ನಾನು ಕೈ ಚಿಹ್ನೆಗೆ ಮತ ಹಾಕಬೇಕು, ಕರ್ಕೊಂಡು ಹೋಗ್ತೀಯಾ ಮಗಾ..? ಎಂದು ಆ ಅಜ್ಜಿ ಮೊಮ್ಮಗನನ್ನು ಕೇಳಿಕೊಂಡಳು.

ಈ ಬಾರಿ ಕೈ ಚಿಹ್ನೆಯ ಅಭ್ಯರ್ಥಿಯೇ ನಮ್ಮ ಪ್ರಾಂತ್ಯದಲ್ಲಿ ಸ್ಪರ್ಧೆಯನ್ನೇ ಮಾಡುತ್ತಿಲ್ಲಾ ಅಜ್ಜೀ... ಬೇರೆ ಕುಟುಂಬಕ್ಕೆ ಬೆಂಬಲ ಕೊಟ್ಟು ಅವರ ಪರ ಕೈ ಚಿಹ್ನೆಯವರು ಪ್ರಚಾರ ಮಾಡ್ತಾ ಇದ್ದಾರಜ್ಜೀ... ನೀನು ಹಾಕೋದಿದ್ರೆ ಅವರ ಚಿಹ್ನೆಗೇ ಮತ ಹಾಕಬೇಕಷ್ಟೆ ಅಂದ, ಮೊಮ್ಮಗ.

ತಾನು ಮತ ಹಾಕಲು ಪ್ರಾರಂಭಿಸಿದಾಗಿಂದಲೂ ಕೈ ಚಿಹ್ನೆ ಹೊರತುಪಡಿಸಿ ಬೇರೆ ಯಾವ ಚಿಹ್ನೆಗೂ ಮತ ಹಾಕದಿದ್ದ ಆ ಅಜ್ಜಿಗೆ ಆಘಾತವಾಗಲು ಅದೊಂದೇ ವಿಷಯ ಸಾಕಾಗಿಬಿಟ್ಟಿತ್ತು. ತನ್ನ ಕೊನೇ ಆಸೆ ಈಡೇರುವುದಿಲ್ಲವೆನ್ನುವುದು ಗೊತ್ತಾಗುತ್ತಿದ್ದಂತೆಯೇ ಆಕೆಯ ಪ್ರಾಣಪಕ್ಷಿ ಹಾರಿಹೋಗಿಬಿಟ್ಟಿತು!

ರಾಜಾ ವಿಕ್ರಮಾ, ಈಗ ನೀನೇ ಹೇಳು. ತನ್ನ ಕೊನೆಯ ಆಸೆ ಈಡೇರುವುದಿಲ್ಲವೆನ್ನುವುದನ್ನರಿತು ಮೃತಪಟ್ಟ ಆ ಅಜ್ಜಿಯ ಸಾವಿಗೆ ಯಾರು ಕಾರಣ? ಸೂಕ್ಷ್ಮವಾದ ವಿಚಾರವನ್ನು ಅಜ್ಜಿಗೆ ಸೂಕ್ಷ್ಮವಾಗಿ ತಿಳಿಹೇಳಿ ಸಂಭಾಳಿಸಬೇಕಾಗಿದ್ದ ಆಕೆಯ ಮೊಮ್ಮಗನೇ? ಕೊನೆಯವರೆಗೂ ವಿಚಾರ ಏನೇ ಇದ್ದರೂ ಚಿಹ್ನೆಯನ್ನಷ್ಟೇ ನೋಡಿ ಮತ ಹಾಕುವ ಕಲೆಯಾರೊಂದಿದೆ ಎಂದು ತಿಳಿದಿದ್ದರೂ ತಮ್ಮ ಅಭ್ಯರ್ಥಿಯನ್ನು ನಿಲ್ಲಿಸದ ಆ ರಾಜ ಕುಟುಂಬವೇ? ನಮಗೆ ಬೆಂಬಲ ನೀಡದಿದ್ದರೆ ನಿಮ್ಮ ಅಸ್ತಿತ್ವವೇ ಉಳಿಯುವುದಿಲ್ಲ ಎಂದು ಭಯಪಡಿಸಿ ರಾಜಕುಟುಂಬದವರು ಆ ಪ್ರಾಂತ್ಯವನ್ನು ತಮಗೆ ಬಿಟ್ಟುಕೊಡುವಂತೆ ಮಾಡಿಕೊಂಡ ಅವರ ಮಿತ್ರ ಕುಟುಂಬವೇ? ಈಗ ಇದೊಂದು ಬಿಡಿಸಲಾಗದ ಸಮಸ್ಯೆಯಾಗಿ ಕುಳಿತಿದೆ. ತಪ್ಪು ಯಾರದ್ದು ಎನ್ನುವುದು ಸ್ಪಷ್ಟವಾಗದ ಹೊರತೂ ಆ ಅಜ್ಜಿಯ ಆತ್ಮಕ್ಕೆ ಮುಕ್ತಿ ದೊರೆಯಲಾರದು.

ಬೇತಾಳ ವಿಕ್ರಮನ ಇನ್ನೊಂದು ಹೆಗಲಮೇಲೆ ತನ್ನ ತಲೆ ಬದಲಾಯಿಸಿ, ರಾಜಾ,ನೀನು ಬಹಳ ಬುದ್ಧಿವಂತ ಎಂದು ಕೇಳಿದ್ದೇನೆ.ನಿಮ್ಮ ರಾಜ್ಯದ ಜನರ ಸಮಸ್ಯೆಗಳನ್ನು ಅತ್ಯಂತ ಸುಲಭವಾಗಿ ನಿವಾರಿಸುತ್ತಿರುವ ಎನ್ನುವುದನ್ನೂ ಕೇಳಿದ್ದೇನೆ. ಒಬ್ಬ ಮುದಿಕನೇ ವ್ಯಕ್ತಿಯಾಗಿ ಇಂತಹದ್ದೊಂದು ಸಮಸ್ಯೆಗೆ ನಿನ್ನ ಅಭಿಪ್ರಾಯವೇನು? ಕೈ ಚಿಹ್ನೆ ಬಿಟ್ಟು ಬೇರೆ ಚಿಹ್ನೆಗಳೇ ಇಲ್ಲ ಎಂದು ನಂಬಿದ್ದ ಆ ಅಜ್ಜಿಯ ಕೊನೆಯ ಆಸೆ ಈಡೇರದೆ ಮೃತಪಟ್ಟ ಘಟನೆಗೆ ಯಾರನ್ನು ಹೊಣೆಗಾರರನ್ನಾಗಿ ಮಾಡಬೇಕು? ಈಗ ನೀನೇ ಈ ಸಮಸ್ಯೆಗೆ ಸಮಾಧಾನಕರ ಉತ್ತರ ನೀಡಬೇಕು. ಎಂದಿತು.

ವಿಕ್ರಮಾದಿತ್ಯ ಏನೊಂದೂ ಮಾತನಾಡದೆ ಮೌನವಾಗಿ ನಡೆಯುತ್ತಲೇ ಇದ್ದ.

ಬೇತಾಳ ಪಟ್ಟು ಬಿಡದೆ, ಕೋಪಗೊಂಡಂತೆ ನಟಿಸುತ್ತಾ ರಾಜಾ, ನನ್ನ ಪ್ರಶ್ನೆಗೆ ನೀನು ಉತ್ತರ ನೀಡಿಲ್ಲ, ಉತ್ತರ ತಿಳಿದಿಲ್ಲವೇ ಅಥವಾ ತಿಳಿದೂ ಹೇಳುತ್ತಿಲ್ಲವೇ? ಉತ್ತರ ತಿಳಿಯದಿದ್ದಲ್ಲಿ ಸೋತೆನೆಂದು ಒಪ್ಪಿಕೋ. ತಿಳಿದೂ ನೀನು ಹೇಳದಿದ್ದಲ್ಲಿ ನಿನ್ನ ತಲೆ ಸಿಡಿದು ನೂರು ಹೋಳಾಗುವುದು, ಜಾಗ್ರತೆ. ಎಂದು ಬೆದರಿಸಿತು.

ಆಗ ರಾಜಾ ವಿಕ್ರಮನು ತನ್ನ ಮೌನ ಮುರಿದು,ಎಲೈ ಬೇತಾಳವೆ, ನಿನ್ನ ಪ್ರಶ್ನೆಗಳು ಉತ್ತರಿಸಲಾಗದಷ್ಟು ಕಷ್ಟಕರವಾದದ್ದೇನೂ ಅಲ್ಲ,ನನ್ನ ತಲೆ ನೂರು ಹೋಳಾಗಲಿದೆ ಎಂಬ ಭಯದಿಂದ ಅಲ್ಲ, ಒಬ್ಬ ರಾಜನಾಗಿ ನ್ಯಾಯಯುತವಾದ ಉತ್ತರ ನೀಡುವುದು ಧರ್ಮವೆಂದು ತಿಳಿದು ಉತ್ತರ ಕೊಡುತ್ತೇನೆ ಕೇಳು ಎಂದು ತನ್ನ ಅಭಿಪ್ರಾಯವನ್ನು ಹೇಳತೊಡಗಿದನು.

ಬದಲಾವಣೆ ಜಗದ ನಿಯಮ. ಅದೇ ರೀತಿ ಜನರು ಕೂಡಾ ಬದಲಾಗಿದ್ದಾರೆ. ಅದನ್ನು ಪ್ರತಿಯೊಬ್ಬರೂ ಒಪ್ಪಿಕೊಳ್ಳಲೇಬೇಕು. ನರೇಂದ್ರನೆನ್ನುವ ಜನಪ್ರಿಯ ನಾಯಕನ ಭಯದಿಂದ ನಾವೆಲ್ಲಿ ಧೂಳೀಪಟವಾಗಿಬಿಡುತ್ತೇವೋ ಎನ್ನುವ ಭಯದಲ್ಲಿ ಆ ರಾಜಕುಟುಂಬ ಇನ್ನೊಂದು ಕುಟುಂಬದೊಂದಿಗೆ ಕೈ ಜೋಡಿಸಿದ್ದು ಕೂಡಾ ತಪ್ಪಲ್ಲ, ಏಕೆಂದರೆ ಬದುಕೋಣಿಯಲು ಕೊನೆಯ ಉಸಿರುವವರೆಗೂ ಹೋರಾಡಬೇಕಿರುವುದು ಪ್ರತಿಯೊಂದು ಜೀವಿಯ ಕರ್ತವ್ಯವೂ ಹೌದು. ಇನ್ನು ನಮ್ಮ ಜೊತೆ ಕೈ ಜೋಡಿಸದಿದ್ದರೆ ನಿಮ್ಮ ಅಸ್ತಿತ್ವವೇ ಉಳಿಯುವುದಿಲ್ಲ ಎಂದು ಬೆದರಿಸಿ ತಮ್ಮನ್ನು ಬೆಂಬಲಿಸುವಂತೆ ಮಾಡಿಕೊಂಡ ಆ ಇನ್ನೊಂದು ಪ್ರಾಂತೀಯ ರಾಜ ಕುಟುಂಬದ ಬಗ್ಗೆ ಕೂಡಾ ನನಗೆ ಯಾವುದೇ ತಕರಾರಿಲ್ಲ, ಏಕೆಂದರೆ ಒಬ್ಬ ದುರ್ಬಲನಾಗುತ್ತಿದ್ದಾನೆಂದರೆ ಆತನನ್ನು ಎಷ್ಟು ಸಾಧ್ಯವೋ ಅಷ್ಟು ತುಳಿದು ಬೆನ್ನ ಮೇಲೆ ಹತ್ತಿ ಎತ್ತರಕ್ಕೆ ನಿಲ್ಲುವುದು ಈ ಲೋಕದ ನಿಯಮ. ಅದ್ದರಿಂದ ಮೇಲ್ನೋಟಕ್ಕೆ ಅವರ್ಯಾರ ತಪ್ಪುಗಳೂ ನನಗೆ ಕಾಣಿಸುತ್ತಿಲ್ಲ.

ಹಾಗೆ ನೋಡಿದರೆ ಸ್ವಲ್ಪ ಯೋಚಿಸಿದ್ದರೂ ಸುತ್ತ ಮುತ್ತಲೂ ಅನೇಕ ಸದ್ದುಗಳನ್ನು ಕಂಡುಕೊಳ್ಳುವ ಅವಕಾಶವಿದ್ದಾಗಿಯೂ ಅದೇನನ್ನೂ ತಿಳಿಯದೆ ತನ್ನ ಜೀವನಮಾನವಿಡೀ ಕಾರಣವೇ ಇಲ್ಲದೆ ಕೈ ಚಿಹ್ನೆಗೇ ಮತ ಹಾಕುತ್ತಾ ಬಂದಿದ್ದ ಅಜ್ಜಿಯದ್ದೇ ನಿಜವಾದ ತಪ್ಪು" ಎಂದು ಉತ್ತರಿಸಿ ಬೇತಾಳನ ಕಡೆ ತಿರುಗಿ ಗೆದ್ದವನಂತೆ ಮೀಸೆ ತಿರುವಿ ಮುಗುಳ್ನಕ್ಕ.

ಜಟಿಲವಾದ ಸಮಸ್ಯೆಗೆ ಅತ್ಯಂತ ಸುಲಭವಾಗಿ ಸಮರ್ಥ ಉತ್ತರ ನೀಡಿದ ವಿಕ್ರಮನ ಜಾಣ್ಮೆಗೆ ಮೆಚ್ಚುಗೆ ಸೂಚಿಸುತ್ತಾ ಬೇತಾಳ ಭಲೇ ವಿಕ್ರಮಾ ಭಲೇ,ಅದ್ಭುತವಾದ ಉತ್ತರ ನೀಡಿದೆ. ನಿಜಕ್ಕೂ ನಿನ್ನ ಜಾಣ್ಮೆಗೆ ಸಾಟಿಯಿಲ್ಲ, ಆದರೆ ನೀನು ನಿನ್ನ ಮೌನ ಮುರಿವ ಮೂಲಕ ನನ್ನ ಕರಾರನ್ನು ಮುರಿದುಬಿಟ್ಟೆ ಹಹ್ಹ ಹಹ್ಹ ಹಹ್ಹಾ... ನಿನಗೆ ನಾನು ಸಿಕ್ಕಿಬಾರೆ,ನಾನಿದೋ ಹೊರಟೆ ಎನ್ನುತ್ತಾ ವಿಕ್ರಮನ ಹೆಗಲ ಮೇಲಿಂದ ನೇರವಾಗಿ ಮೇಲಕ್ಕೇರಿ ಗಾಳಿಯಲ್ಲಿ ತೇಲುತ್ತಾ ತಾನು ಮೊದಲಿದ್ದ ಮರದ ಮೇಲೆ ಹೋಗಿ ತಲೆಕೆಳಗಾಗಿ ನೇತಾಡುತ್ತಾ 'ನಾನೊಬ್ಬ ಕಳ್ಳನೂ ಬಲು ಮೋಸಗಾರನೂ ನಿಜವೇನೂ...' ಎಂದು ತನಗಿಷ್ಟವಾದ ಹಾಡೊಂದನ್ನು ಗುನುಗುತ್ತಾ ಜೀಕಾಡತೊಡಗಿತು.

ಉಳುವ, ಗೊಬ್ಬರ ಕೊಡುವ, ಆರೋಗ್ಯ ರಕ್ಷಿಸುವ, ಹಾಲು ಕೊಡುವ ದೇಶಿ ಗೋವುಗಳಿಂದ ಮತ್ತು ದೇಶಿ ಗೋ ಆಧಾರಿತ ಕೃಷಿಯಿಂದ ರೈತನಿಗೆ, ಪರಿಸರಕ್ಕೆ, ಆರೋಗ್ಯಕ್ಕೆ ಮತ್ತು ದೇಶಕ್ಕೂ ಒಳಿತಲ್ಲವೇ.

# ದೇಶಕ್ಕೂ ಹಿತ ಗೋವು ಆಧಾರಿತ ಕೃಷಿ

• ಕೆ.ಎಸ್. ಶೈಲೇಶ್ ಹೊಳ್ಳ

ಭಾರತ ಹಳ್ಳಿಗಳ ದೇಶ. ಇಲ್ಲಿ ಸರ್ಕಾರದ ಅಂಕಿ ಅಂಶದ ಪ್ರಕಾರ ಸುಮಾರು 6,38,365 ಹಳ್ಳಿಗಳಿವೆ. ಹಾಗಾಗಿ ಇಲ್ಲಿಯ ಸುಮಾರು ಶೇಕಡಾ 74ರಷ್ಟು ಜನ ಹಳ್ಳಿಗಳಲ್ಲಿಯೇ ವಾಸಿಸುತ್ತಿದ್ದಾರೆ. ಹಾಗೆಯೇ ಇಲ್ಲಿಯ ಸುಮಾರು ಶೇಕಡಾ 64ರಷ್ಟು ಜನರ ಜೀವನೋಪಾಯವು ಸಹ ಇಂದಿಗೂ ಕೃಷಿಯೇ ಆಗಿದೆ. ಅಷ್ಟೇ ಅಲ್ಲದೆ ಒಂದು ಸಮೀಕ್ಷೆಯಂತೆ ದೇಶದಲ್ಲಿರುವ ಒಟ್ಟು ಕೃಷಿ ಭೂಮಿಯ ವಿಸ್ತೀರ್ಣ ಸುಮಾರು 1426 ಲಕ್ಷ ಹೆಕ್ಟೇರುಗಳು ಎಂಬುದಾಗಿ ಅಂದಾಜಿಸಲಾಗಿದೆ. ಇದು ದೇಶದ ಒಟ್ಟು ವಿಸ್ತೀರ್ಣದ ಸುಮಾರು ಶೇಕಡಾ 43ರಷ್ಟಾಗಿದೆ. ಇದರಲ್ಲಿ ಕೇವಲ 570 ಲಕ್ಷ ಹೆಕ್ಟೇರುಗಳಿಗೆ ಮಾತ್ರ ನೀರಾವರಿಯ ಸೌಲಭ್ಯವಿದ್ದರೆ ಇನ್ನುಳಿದ 856 ಲಕ್ಷ ಹೆಕ್ಟೇರುಗಳಿಗೆ ಇಂದಿಗೂ ಸಹ ನೀರಾವರಿಯನ್ನು ಒದಗಿಸಲು ಸಾಧ್ಯವಾಗಿಲ್ಲ.

ಮೇಲಿನ ಅಂಕಿ ಅಂಶಗಳಿಂದ ಸ್ಪಷ್ಟವಾಗುವುದೇನೆಂದರೆ ಭಾರತ ಒಂದು ಕೃಷಿ ಪ್ರಧಾನ ದೇಶ ಎಂದು. ಅಷ್ಟೇ ಅಲ್ಲದೆ ಇಲ್ಲಿಯ ಕೃಷಿ ಸಹ ಅತ್ಯಂತ ಸಾಂಪ್ರದಾಯಿಕವಾಗಿ ಕೂಡಿದ್ದು ಅತೀ ಉತ್ಕೃಷ್ಟ ಮಟ್ಟದ್ದಾಗಿದೆ ಎಂದು. ಹಾಗಾಗಿ ಇಲ್ಲಿ ಕೃಷಿ ಎಂಬುದು ಒಂದು ಉದ್ಯೋಗವಾಗದೆ, ಅದೊಂದು ಪವಿತ್ರಕಾಯಕವಾಗಿದೆ. ಒಂದು ಪವಿತ್ರ ಸಂಸ್ಕೃತಿಯಾಗಿದೆ. ಈ ಕಾರಣಕ್ಕಾಗಿಯೇ ಈ ದೇಶದ ಬಹು ಸಂಖ್ಯಾತ ಜನರು ಕೃಷಿಯನ್ನೇ ತಮ್ಮ ಮುಖ್ಯ ವೃತ್ತಿಯನ್ನಾಗಿಸಿಕೊಂಡು ಅದರಲ್ಲೇ ತಮ್ಮ ಜೀವನವನ್ನು ಕಂಡುಕೊಂಡಿರುವುದು. ಹೀಗಾಗಿಯೇ ಈ ದೇಶದಲ್ಲಿ ಕೃಷಿಗೆ ಹೆಚ್ಚಿನ ಪ್ರಾಧಾನ್ಯತೆ ಸಹಜವಾಗಿಯೇ ದೊರೆತಿದೆ. ಇದಕ್ಕೆ ಸಾಕ್ಷಿ ದೇಶದಲ್ಲಿ ಇಂದಿಗೂ ಯಾವುದೇ ಉದ್ದಿಮೆಗಳಿಗಿಂತ ಕೃಷಿ ರಂಗವು ಅತಿ ಹೆಚ್ಚಿನ ಸಂಖ್ಯೆಯ ಜನರಿಗೆ ಉದ್ಯೋಗವನ್ನು ಒದಗಿಸಿರುವುದು.

ಹಿಂದೆ ಇಡೀ ದೇಶದ ಬೇಸಾಯವೆಲ್ಲ ಗೋವಂಶಗಳಿಂದಲೇ ಆಗುತ್ತಿತ್ತು. ಒಂದು ಸಮೀಕ್ಷೆಯಂತೆ ಈ ದೇಶದ ಸುಮಾರು 40 ಕೋಟಿ ಎಕರೆ ಕೃಷಿ ಭೂಮಿಯ ಬೇಸಾಯಕ್ಕೆ ಗೋವೇ ಆಧಾರವಾಗಿತ್ತು. ಹಾಗೆಯೇ ವ್ಯವಸಾಯಕ್ಕೆ ಬೇಕಾಗುವ ಶೇಕಡಾ 90ರಷ್ಟು ಶಕ್ತಿ ಗೋವಂಶದಿಂದಲೇ ದೊರೆಯುತ್ತಿತ್ತು. ದೇಶದ ಸುಮಾರು ಶೇಕಡಾ 65ರಷ್ಟು ಭೂಮಿಯನ್ನು ಇಲ್ಲಿಯ ಎತ್ತುಗಳೇ ಸಾಗುವಳಿ ಮಾಡುತ್ತಿದ್ದವು. ಹೀಗಾಗಿ ವಾಣಿಜ್ಯ ಕೈಗಾರಿಕೆಗಳು ಎಷ್ಟೇ ಪ್ರಗತಿ ಸಾಧಿಸಿದ್ದರೂ, ಇಂದಿಗೂ ಈ ದೇಶದ ಸುಮಾರು ಶೇಕಡಾ 70ರಷ್ಟು ಕುಟುಂಬಗಳಿಗೆ ಕೃಷಿಯೇ ಆಧಾರವಾಗಿದೆ.

ಆದರೆ ಇತ್ತೀಚಿನ ಬೆಳವಣಿಗೆಗಳಿಂದಾಗಿ ಭಾರಿ ಪ್ರಮಾಣದ ರಾಸಾಯನಿಕಗಳು, ಹೈಬ್ರಿಡ್ ಬೀಜಗಳ ಜೊತೆಗೆ ಟ್ರ್ಯಾಕ್ಟರ್ ಕೂಡಾ ಬಂದು ನಿಂತಿದೆ. ಆದರೆ ಈ ಟ್ರ್ಯಾಕ್ಟರ್‌ನಿಂದಾದ ಉಪಯೋಗವಾದರೂ ಏನು? ಏನೂ ಇಲ್ಲ! ಬದಲಾಗಿ ಇದರಿಂದ ಹೆಚ್ಚಿನ ಅಪಾಯವೇ ಆಗಿದೆ. ಟ್ರ್ಯಾಕ್ಟರ್‌ನ ಯಂತ್ರಶಕ್ತಿ ಮಣ್ಣನ್ನು ಬಿಡಿಮಾಡಲು ಮಾಡಿ ಆಳಕ್ಕಿಳಿದು ಮಣ್ಣನ್ನು ಸೂರ್ಯಕಿರಣಕ್ಕೆ ತೆರೆದಿಟ್ಟು ಅದರ ಜೀವಂತಿಕೆ ನಿಶಕ್ತವಾಗಲು ಕಾರಣವಾಗುತ್ತಿರುವುದು ವೈಜ್ಞಾನಿಕವಾಗಿ ಸಾಬೀತಾಗಿದೆ. ಆದರೆ ರೈತನ ನೇಗಿಲು ಭೂಮಿಯಲ್ಲಿ 9 ಅಂಗುಲಕ್ಕಿಂತ ಹೆಚ್ಚು ಆಳಕ್ಕೆ ಹೋಗದೇ ಭೂಮಿಯನ್ನು ಹದವಾಗಿಸುತ್ತಿತ್ತು.

ದುರಾದೃಷ್ಟಕರವೇನೆಂದರೆ ಸಹಸ್ರಾರು ವರ್ಷಗಳಿಂದ ವೇದಗಳು ಬಾಯಿಂದ ಬಾಯಿಗೆ ಬಂದಂತೆ ಕೃಷಿ ಪದ್ಧತಿಗಳು ಈ ದೇಶದ ಜನರ ಬಾಯಲ್ಲಿ ಹರಿದಾಡಲಿಲ್ಲ. ಅಷ್ಟಾದರೂ ಹಿಂದಿನ ಪಾರಂಪರಿಕ ಹಾಗೂ ಸಾಂಪ್ರದಾಯಿಕ ಕೃಷಿಯಲ್ಲಿ ರೈತ ಏನೂ ಬಂಡವಾಳ ಹಾಕದೆ ಬೆಳೆದು ಉತ್ತಮ ಇಳುವರಿಯನ್ನು ತೆಗೆಯುತ್ತಿದ್ದ. ಆಗ ಹೊಲದ ಮಣ್ಣು ಕೆಟ್ಟಿರಲಿಲ್ಲ, ವಾತಾವರಣವೂ ವಿಷವಾಗಿರಲಿಲ್ಲ, ತಿನ್ನುವ ಆಹಾರ ವಿಷ ಮಿಶ್ರಿತವಾಗಿರಲಿಲ್ಲ, ಜನರ ಆರೋಗ್ಯ ಕೆಟ್ಟಿರಲಿಲ್ಲ. ಮುಖ್ಯವಾಗಿ ಸಾಂಪ್ರದಾಯಿಕ ಕೃಷಿಕರು ನೆಮ್ಮದಿಯನ್ನು ಹೊಂದಿದ್ದ ಮತ್ತು ಶ್ರಮ ಜೀವಿಯಾಗಿದ್ದ. ಹೀಗಾಗಿ ವ್ಯವಸಾಯಕ್ಕೆ ಸಂಬಂಧಪಟ್ಟಂತೆ ಶೇಕಡಾ 99 ರಷ್ಟು ಕೀಟಗಳು ಮತ್ತು ಸೂಕ್ಷ್ಮಾಣು ಜೀವಿಗಳು ಭೂಮಿಗೆ ಮತ್ತು ಪರಿಸರಕ್ಕೆ ಹಾನಿ ರಹಿತವಾಗಿದ್ದವು. ಆದರೆ ಕಾಲಕ್ರಮೇಣ ಈ ದೇಶದ ಪಾರಂಪರಿಕ ಕೃಷಿ ಪಾಶ್ಚಿಮಾತ್ಯೀಕರಣಗೊಳ್ಳುತ್ತಾ ಹೋಯಿತು. 1950ರ ವೇಳೆಗೆ ಮತ್ತು 1960ರ ಹಸಿರುಕ್ರಾಂತಿಯ ನಂತರ ಈ ಹುಚ್ಚು ಇನ್ನು ಹೆಚ್ಚಾಗುತ್ತಾ ಹೋಯಿತು. ಪರಿಣಾಮವಾಗಿ ಭಾರತದಲ್ಲಿ ಪಾಶ್ಚಾತ್ಯ ಕೃಷಿಪದ್ಧತಿ ಜಾರಿಗೆ ಬಂತು. ಆದರೆ ಪಶ್ಚಿಮದ ಈ ಕೃಷಿ ನೀತಿ ನಮ್ಮ ದೇಶದ ಮಣ್ಣಿಗೆ, ಆಹಾರ ಪದ್ಧತಿಗೆ ಮತ್ತು ಕೃಷಿ ಬದುಕಿಗೆ ಎಂದಿಗೂ ಸರಿಹೊಂದುವಂತಹದಲ್ಲ ಎಂದು ಅರಿವಾಗುವ ವೇಳೆಗೆ ಇಲ್ಲಿಯ ಉಳುವ ಯೋಗಿ ಬರುಡಾಗಿ ತಿರುಗಿದ್ದ.

ಪಾಶ್ಚಾತ್ಯ ದೇಶಗಳಲ್ಲಿನ ಹಿಡುವಳಿಗಳು ತುಂಬಾ ದೊಡ್ಡ ಪ್ರಮಾಣದವು. ಅಲ್ಲಿ ಅವರು ನೂರಾರು ಎಕರೆಯಲ್ಲಿ ಒಂದೇ ಬೆಳೆಯನ್ನು ಬೆಳೆಯುತ್ತಾರೆ. ಹೀಗಾಗಿ ಅಲ್ಲಿ ಪ್ರತಿ ಬಾರಿ ಬಳಸುವ ಭಾರಿ ಪ್ರಮಾಣದ ರಾಸಾಯನಿಕಗಳಿಂದಾಗಿ ಅವರ ಒಂದು ಭಾಗದ ಭೂಮಿ ಬಂಜರಾಗುತ್ತಿದ್ದಂತೆಯೇ, ಮತ್ತೊಂದು ಭಾಗದ ಭೂಮಿಯಲ್ಲಿ ಧಾನ್ಯಗಳನ್ನು ಬೆಳೆಯಲು ಪ್ರಾರಂಭಿಸುತ್ತಾರೆ. ಆದರೆ ಭಾರತದಲ್ಲಿ ಈ ಪದ್ಧತಿ ಎಂದಿಗೂ ಸಾಧ್ಯವಿಲ್ಲ. ಇಲ್ಲಿನ ಹಿಡುವಳಿಗಳ ಗಾತ್ರ ಚಿಕ್ಕದು ಮತ್ತು ಆಹಾರ ಪದ್ಧತಿಯೂ ಅಲ್ಲಿನಂತಿಲ್ಲ. ಆದರೆ ಇಂದು ಆಧುನಿಕ ಕೃಷಿಯ ಅಂಧಾನುಕರಣೆಯಿಂದ ಇಲ್ಲಿಯ ರೈತರು ರಾಸಾಯನಿಕಗಳನ್ನು ಅವರಿಗಿಂತ ಹೆಚ್ಚಾಗಿ ಬಳಸುತ್ತಾ ತಮ್ಮ ಚಿಕ್ಕ ಹಿಡುವಳಿಗಳನ್ನು ಸಹ ಬಂಜರು ಮಾಡಿಕೊಳ್ಳುವತ್ತ ಸಾಗುತ್ತಿದ್ದಾರೆ. ನಂತರ ಪರ್ಯಾಯ ಭೂಮಿಯಿಲ್ಲದೆ ಜೀವನವಿಡಿ ಪರಿತಪಿಸುವಂತಹ ಪರಿಸ್ಥಿತಿಯನ್ನು ಸೃಷ್ಟಿಸಿಕೊಳ್ಳುತ್ತಿದ್ದಾರೆ.

ಒಂದು ಸಮೀಕ್ಷೆಯ ಪ್ರಕಾರ ಪ್ರತಿ ವರ್ಷ ಭಾರತದ ರೈತರು ಸುಮಾರು 48 ಸಾವಿರ ಕೋಟಿ ರೂಪಾಯಿ ಮೌಲ್ಯದ ರಾಸಾಯನಿಕಗಳನ್ನು ಬಳಸುತ್ತಿದ್ದಾರೆ. ಆದರೆ ಸಗಣಿ ಮತ್ತು ಗೋಮೂತ್ರದ ಬಳಕೆಯಿಂದಾಗಿ ಪ್ರತಿವರ್ಷ ಭಾರತದ ರೈತರು ಇಷ್ಟು ಸಾವಿರ ಕೋಟಿ ಹಣವನ್ನು ಉಳಿಸಬಹುದಾಗಿದೆ. ದುಷ್ಪರಿಣಾಮ ಅಲ್ಲದೆ ನಿರಂತರ ರಾಸಾಯನಿಕಗಳ ಬಳಕೆಯಿಂದ ಭೂಮಿ ಬಂಜರಾಗುವುದನ್ನು ತಪ್ಪಿಸಬಹುದಾಗಿದೆ. ಇಲ್ಲದಿದ್ದಲ್ಲಿ ಇದೇ ರೀತಿ ಮುಂದುವರಿದರೆ ಜಗತ್ತಿನ ಅನೇಕ ದೇಶಗಳ ಕೃಷಿ ಭೂಮಿಗಳಂತೆ ಭಾರತದ ಮಣ್ಣೂ ಉಳಿಯುವುದು ಕೆಲವೇ ಕೆಲವು ವರ್ಷಗಳ ಆಯುಷ್ಯ ಮಾತ್ರ.

ಜಪಾನಿನ ನೋಬೆಲ್ ಪ್ರಶಸ್ತಿ ವಿಜೇತ ರೈತ ಮತ್ತು ಸಾಹಿತಿಯಾದ ಮೊಸು ಫುಕಾ ಹೇಳುತ್ತಾರೆ, 'ಈ ಬಹು ಉತ್ಪಾದನೆಯ ಬೀಜಗಳು ಅಣುಬಾಂಬುಗಳಿಗಿಂತಲೂ ಭೀಕರ, ದೇಶಿ ಹಸುವಿನ ದನಗೊಬ್ಬರಗಳನ್ನು ಬಳಸುವ ಮೂಲಕ ನಾವು ಈ ಸಮಸ್ಯೆಗಳಿಂದ ಪಾರಾಗಬಹುದು ಎನ್ನುವುದನ್ನು ನಾನು ನನ್ನ ಜಮೀನಿನಲ್ಲಿ ಸ್ವತಃ ಸಾಧಿಸಿ ತೋರಿಸಿದ್ದೇನೆ' ಎಂದು.

ಹೀಗಾಗಿ ಕೃಷಿ ನಮ್ಮ ಬದುಕಿನ ಆಧಾರ ಸ್ತಂಭವಾಗಿರುವುದರಿಂದ ಗೋವು ಕೃಷಿಯ ಆಧಾರ ಸ್ತಂಭವಾಗಿದೆ. ಇದರಿಂದ ಗೋಸಂಪತ್ತಿನ ಪ್ರಾಣಿಯಿಂದು ಕೇವಲ ಧಾರ್ಮಿಕ ವಿಷಯಕ್ಕೆ ಮಾತ್ರ ಸೀಮಿತವಾಗದೇ, ಭಾರತದ ಆರ್ಥಿಕ ಬೆನ್ನೆಲುಬಾದ ಕೃಷಿಯ ಜೀವಾಳವಾಗಿ ಕಂಡುಬಂದಿದೆ. ಇದಕ್ಕೆ ಸಾಕ್ಷಿ ಒಂದು ಕೃಷಿ ಕುಟುಂಬದಲ್ಲಿ ಕೇವಲ ಎರಡು ಗೋವುಗಳಿದ್ದರೆ ಸಾಕು, ಅವುಗಳು ಒಂದು ಸಂಸಾರವನ್ನು ಸಾಕುವುದೇ ಆಗಿದೆ. ಹೀಗಾಗಿ ಗೋವಿನ ಅಳಿವು ಕೃಷಿಯ ಅಳಿವಾದರೆ, ಕೃಷಿಯ ಅಳಿವು ಭಾರತದ ಅಳಿವಾಗಿದೆ. ಈ ಕಾರಣಕ್ಕೆ ಇರಬೇಕು 'ಸರ್ವಜ್ಞ' ಕವಿ 'ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆ ಮೇಲು' ಎಂಬುದಾಗಿ ಹೇಳಿರುವುದು.

ನಮ್ಮಲ್ಲಿಯ ವ್ಯವಸಾಯವು ಉತ್ತಮ ರೀತಿಯಿಂದ ನಡೆಯಬೇಕಾದರೆ ಮತ್ತು ಇಲ್ಲಿಯ ಜನರು ಆರೋಗ್ಯಶಾಲಿಗಳಾಗಿಯೂ, ದೃಢಕಾಯರಾಗಿಯೂ ಇರಬೇಕಾದರೆ ನಮ್ಮಲ್ಲಿ ಗೋವುಗಳು ಗಟ್ಟಿ ಮುಟ್ಟಾಗಿ, ದುಡಿಯುವುದಕ್ಕೆ ತಕ್ಕದಾಗಿ, ಪೌಷ್ಟಿಕ ಹಾಲನ್ನು ಕೊಡಬಲ್ಲವಾಗಿರಬೇಕು. ವ್ಯವಸಾಯದಲ್ಲಿ ಉಳುವುದು ಮತ್ತು ಸಾಗಾಣಿಕೆಯಿಂದ ಹಿಡಿದು ಪ್ರತಿಯೊಂದು ಕೆಲಸಗಳಿಗೆ ಗೋವುಗಳು ಅತ್ಯವಶ್ಯಕ. ಆದುದರಿಂದ ಭಾರತದ ವ್ಯವಸಾಯಕ್ಕೆ ಗೋವು ಆಧಾರಭೂತವಾಗಿದೆ ಮತು ಅತಿ ಮಹತ್ವವುಳ್ಳದ್ದಾಗಿದೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ಸಾವಿರಾರು ವರ್ಷಗಳಿಂದ ಸಾಗಿ ಬಂದಿರುವ ಗೋ ಆಧಾರಿತ ಭಾರತೀಯ ಕೃಷಿ ಪದ್ಧತಿಯೇ ನಿಜವಾದ ಮತ್ತು ಸುಸ್ಥಿರ ಕೃಷಿ ಪದ್ಧತಿ. ಕೇವಲ 40 ವರ್ಷಗಳಿಂದೀಚೆಗೆ ಯಾರದೋ ಕುತಂತ್ರದಿಂದ ಭಾರತಕ್ಕೆ ಬಂದ ರಾಸಾಯನಿಕಗಳ ಆಧಾರಿತ ಕೃಷಿ ಪದ್ಧತಿಯಿಂದ ಭಾರತದ ರೈತ ಧೂಳೀಪಟವಾಗುವುದು ಹಸಿವಿನ್ನೂ ಇದಕ್ಕೆ ಮುಂಚಿತಾ ಅದರಿಂದ ಕೊಡದೆ, ಮತ್ತೇ ಗೋ ಆಧಾರಿತ ಕೃಷಿಗೆ ಮರಳ ಬೇಕಾಗಿದೆ. ಇಷ್ಟಕ್ಕೂ ಇದೆಲ್ಲ ಯಾಕೆ ಬೇಕು ಹೇಳಿ? ಉಳಲು ಹಾನಿಕಾರಕ ಟ್ರ್ಯಾಕ್ಟರನ್ನು, ಬೆಳೆಗೆ ವಿಷಯನ್ನು, ಹಾಲಿಗೆ ಯಂತ್ರ ಸ್ವರೂಪೀ ವಿದೇಶಿ ಹಸುವನ್ನು ಜೊತೆಯಿಟ್ಟುಕೊಂಡು ಪರಿಸರವನ್ನು ನಾಶಗೊಳಿಸುತ್ತಾ, ನಮ್ಮನ್ನು ನಾವು ನಾಶಮಾಡಿಕೊಳ್ಳುತ್ತಾ ಸಾಗುವುದು ಸರಿಯಾದ ಮಾರ್ಗವೇ? ಬದಲಾಗಿ ಉಳುವ, ಗೊಬ್ಬರ ಕೊಡುವ, ಆರೋಗ್ಯ ರಕ್ಷಿಸುವ, ಹಾಲು ಕೊಡುವ ದೇಶಿ ಗೋವುಗಳಿಂದ ಮತ್ತು ದೇಶಿ ಗೋ ಆಧಾರಿತ ಕೃಷಿಯಿಂದ ರೈತನಿಗೆ, ಪರಿಸರಕ್ಕೆ, ಆರೋಗ್ಯಕ್ಕೆ ಮತ್ತು ದೇಶಕ್ಕೂ ಒಳಿತಲ್ಲವೇ?

## ಪತ್ರ ಮಿತ್ರ

### ಸ್ವಾಭಿಮಾನದ ಮತದ ಬೆಲೆ !

ಏಪ್ರಿಲ್ 18ರಂದು ನಡೆದ ಮಂಡ್ಯ ಲೋಕಸಭಾ ಕ್ಷೇತ್ರದ ಚುನಾವಣೆಯಲ್ಲಿ ಪ್ರಬಲ ಪೈಪೋಟಿ ಇದ್ದುದು 'ಅಭಿವೃದ್ಧಿ' ಮತ್ತು 'ಸ್ವಾಭಿಮಾನ'ದ ನಡುವೆ. ಇಲ್ಲಿ ಎರಡೂ ಅಭ್ಯರ್ಥಿಗಳು ಪೋಟಿಯಲ್ಲಿ ಆದರ್ಶ ಮತ್ತು ಪ್ರಾಮಾಣಿಕತೆಗೆ ಒತ್ತು ಕೊಡುವ ರೀತಿಯ ಮಾತನ್ನಾಡಿದರೂ ಒಳ್ಳೆ ಮೂಲದ ಪ್ರಕಾರ, ಚುನಾವಣೆಯ ಹಿಂದಿನ ದಿನ ಅಭಿವೃದ್ಧಿ ಪರ ವೋಟುಗಳು ಮಾರುಕಟ್ಟೆಯಲ್ಲಿ ಒಂದು ವೋಟಿಗೆ ಒಂದು ಸಾವಿರ ರೂಪಾಯಿ ದರ ಮುಟ್ಟಿದರೆ, ಸ್ವಾಭಿಮಾನ ಪರ ವೋಟು ತಲಾ ಕೇವಲ ಒಂದು ನೂರು ರೂಪಾಯಿ ದರ ದಾಖಲಿಸಿತು.ಅದೇ ಅಭಿವೃದ್ಧಿ ಪರ ವೋಟು, 'ಫ್ಯಾಮಿಲಿ ಪ್ಯಾಕ್' ಆದಾಗ, ಸುಮಾರು ಹದಿನೈದು ಸಾವಿರ ರೂಪಾಯಿಗಳ ಗಡಿಯ ದಾಟಿದ್ದು ಕೂಡ ಹೌದು. ಇಲ್ಲಿ ಸ್ವಾಭಿಮಾನ ಪರ ಅಭ್ಯರ್ಥಿ ಚುನಾವಣಾ ಪ್ರಚಾರದ ಸಮಯದಲ್ಲಿ,

"ನೀವು ಮಂಡ್ಯ ಜನ, ನಿಮ್ಮ ವೋಟನ್ನು ಹಣಕ್ಕಾಗಿ ಮಾರಿ ಕೊಳ್ಳುವವರಲ್ಲ ನನಗೆ ಚೆನ್ನಾಗಿ ತಿಳಿದಿದೆ" ಎಂದು ವೇದಿಕೆಯ ಮೇಲೆ ಗಿಲೀಟಿನ ಮತ್ತು ಮೋಡಿಯ ಮಾತನ್ನಾಡಿ, ಇದಕ್ಕೆ ವಿರುದ್ಧವಾಗಿ ವೇದಿಕೆಯ ಕೆಳಗೆ ಇದೇ ಅಭ್ಯರ್ಥಿಯ ಕಡೆಯವರು, 'ಸ್ವಾಭಿಮಾನ' ಒಂದಕ್ಕೆ ಕೇವಲ ನೂರು ರೂಪಾಯಿಗಳ ಮಾರುಕಟ್ಟೆ ಬೆಲೆ ಕಟ್ಟಿದ್ದು ಬಹಳ ಕಡಿಮೆ ಎನಿಸಿತು. ಇದರ ಅರ್ಥ ಮಂಡ್ಯ ಜಿಲ್ಲೆಯ ಮತದಾರನ ಸ್ವಾಭಿಮಾನದ ಬೆಲೆ ತಲಾ ಒಂದು ನೂರು ಎಂದು ತಿಳಿಯಬಹುದೆ? ಈ ಸಂದರ್ಭದಲ್ಲಿ ನಮ್ಮ ಜಿಲ್ಲೆಯ ಮತದಾರ ಸ್ವಾಭಿಮಾನದ ತಲಾ ಮಾರುಕಟ್ಟೆ ಬೆಲೆ ತಿಳಿಸಿ ಕೊಟ್ಟ ಸ್ವಾಭಿಮಾನಿ ಅಭ್ಯರ್ಥಿಗೆ ಅನಂತಾನಂತ ಧನ್ಯವಾದಗಳು.

ಸಾರಾಂಶ: ಒಟ್ಟಿನಲ್ಲಿ ನೋಡಾ ಹಿಂದು ಜಾತಿ ರಾಜಕೀಯೊಂದಿಗೆ ಕೂಡಿಕೊಂಡಾಗಿದ ಈ ನಮ್ಮ ಮಂಡ್ಯ ಲೋಕಸಭೆಯ ವೋಟನ್ನು ಮಾರಿಕೊಂಡ ಬಹುಪಾಲು ಸ್ವಾಭಿಮಾನ ಪರ ಮತದಾರನ ಸ್ಥಿತಿ, ಅತ್ತ ಅಭಿವೃದ್ಧಿ ಪರ ಅಭ್ಯರ್ಥಿಯ ಕಡೆಯವರು, ನಾವು ಕಟ್ಟಿದ ವೋಟಿನ ಪ್ರೀಮಿಯಮ್ ಮಾರುಕಟ್ಟೆ ಬೆಲೆ ಸಮರ್ಥನೆಯ ವೇಳೆ 'ಮಂಗನೋಗಾನು ಗೊತ್ತು ಹೆಚ್ಚಿದ್ದುವ ಮಾಣಿಕ್ಯದ ಬೆಲೆ?' ಎಂದು ಸ್ವಾಭಿಮಾನ ಪರ ಮತದಾರರನ್ನು ಒಳಗೊಳಗೆ, ಅಣಕಿಸುತ್ತಿದ್ದಾರಂತೆ.

–ನಾಗಮಂಗಲ ನರಸಿಂಹ ಮೂರ್ತಿ

### ಲಗಾಮಿಲ್ಲದ ಮಾತು

ನಮ್ಮ ರಾಜ್ಯದ ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯನವರು ವಿಶ್ವನಾಯಕ ನಮ್ಮ ಪ್ರಧಾನಿ ಮೋದಿ ಯವರನ್ನು ಏಕವಚನದಲ್ಲಿ ಹೀಯಾಳಿಸಿರುವುದು ಖಂಡನೀಯವಾಗಿದೆ. ತಮಗಿಂತ ಎಲ್ಲ ರೀತಿ ಯಿಂದಲೂ ಉನ್ನತ ಸ್ತರದಲ್ಲಿರುವ , ಇಡೀ ಜಗತ್ತೇ ಗೌರವಿಸುವ ವಿಶಿಷ್ಟ ವಿಶೇಷ ನಾಯಕನನ್ನು ತಮ್ಮ ನೀಚ ನಾಲಿಗೆಯಿಂದ ಟೀಕಿಸುವ ಮೂಲಕ ಸಿದ್ದರಾಮಯ್ಯ ಪ್ರಧಾನಿ ಹುದ್ದೆಯನ್ನೂ ಹೀಗಳೆದಿದ್ದಾರೆ. "ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯನು ಬಿಡು" ಎಂಬ ದಾಸರ ಮಾತಿನಂತೆ ತಮ್ಮ ಮುಸ್ಸಂಜೆ ಕಳೆದುಕೊಳ್ಳದ ತಮ್ಮ ಮನಸ್ಸಿನ ಕೆಸ್ಸಿನೆಯನ್ನು ಶುದ್ಧವಾಗಿಟ್ಟುಕೊಂಡರೆ ಸಿದ್ದು ಸೇಫ್. ಇಲ್ಲವಾದರೆ ಅನಾಸೇಫ್ ಇಡೀ ಭಾರತೀಯರಿಗೆ.

–ಕೆ. ವಿ.ಸೀತಾರಾಮ್, ಮಂಗಳೂರು

### ವಾಕ್ ಸ್ವಾತಂತ್ರ್ಯ ಇಲ್ಲವೆ?

ಭಾರತೀಯ ಸೈನ್ಯ ಬಗ್ಗೆ, ದೇಶದ ಸಂಸ್ಕೃತಿ ಬಗ್ಗೆ, ದೇಶದ ಬಗ್ಗೆ ಟೀಕೆಗಳನ್ನು ಮಾಡುತ್ತ, ಪರೋಕ್ಷವಾಗಿ ಭಯೋತ್ಪಾದಕರಿಗೆ ಬೆಂಬಲ ಸೂಚಿಸುತ್ತ, ಅಭಿವ್ಯಕ್ತಿ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯದ ಹೆಸರಲ್ಲಿ ದೇಶವಿರೋಧಿ ಹೇಳಿಕೆಗಳನ್ನು ಕೊಡುತ್ತಿದ್ದ, ಲೇಖನಗಳನ್ನು ಬರೆಯುತ್ತಿದ್ದ ಎಡಪಂಥೀಯ ಬುದ್ಧಿಜೀವಿಗಳಿಗೆ, ಕಮ್ಯುನಿಸ್ಟರಿಗೆ, ಕಾಂಗ್ರೆಸ್‌ಗೆ ಈಗ ದೇಶಭಕ್ತಿ ಉಕ್ಕಿಬಂದಿದೆ. ಸಾಧ್ವಿ ಪ್ರಜ್ಞಾಸಿಂಗ್‌ರ ಒಂದು ಹೇಳಿಕೆ ಇವರಿಗೆಲ್ಲ ದಿಢೀರನೆ ದೇಶಭಕ್ತಿ ಉಕ್ಕಲು ಕಾರಣ. ಸಾಧ್ವಿ ಪ್ರಜ್ಞಾ ಸಿಂಗ್ ತಮಗಾದ ಅನ್ಯಾಯವನ್ನು ಹೇಳಿಕೊಂಡಿದ್ದಾರೆ. ಅವರು ಅನುಭವಿಸಿರುವ ನರಕ ಯಾತನೆಯು ಅವರಿಂದ ಇಂತಹ ಮಾತುಗಳನ್ನು ಹೊರಡಿಸಿದೆ. ಅವರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ ಇಲ್ಲವೇ? ಅವು ಕೇವಲ ಎಡಪಂಥೀಯರ ಮತ್ತು ಕಾಂಗ್ರೆಸ್ ಅನುಯಾಯಿಗಳ ಸೊತ್ತೆ?

–ಶ್ರೀರಂಗ ಪುರಾಣಿಕ, ವಿಜಯಪುರ

ನೈಜ ಸಂಗತಿಗಳನ್ನು ಪರಿಗಣಿಸದೆ ಗಾಂಧೀಜಿ ವಿಷಯವಾಗಿ ಸಂಘದ ಬಗ್ಗೆ ಹಗುರವಾಗಿ ಮಾತನಾಡುವುದು ಸತ್ಯಕ್ಕೆ ಮಾಡುವ ಅಪಚಾರ. ಗಾಂಧೀಜಿಯವರ ಆದರ್ಶಗಳನ್ನು ಸಂಘವು ಉಳಿಸಿಕೊಂಡು ಬಂದಿದೆಯಲ್ಲದೇ, ಅವರದೇ ಚಿಂತನೆಗಳಾದ ಗ್ರಾಮ ವಿಕಾಸ, ಸಾವಯವ ಕೃಷಿ, ಗೋ ಸಂರಕ್ಷಣೆ, ಸಾಮಾಜಿಕ ಸಾಮರಸ್ಯ, ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಮಕ್ಕಳಿಗೆ ಒದಗಿಸಬೇಕೆಂಬ ನಿಲುವು, ಸ್ವದೇಶಿ ಆಚಾರ, ಪ್ರಚಾರ ತನ್ಮೂಲಕ ಸ್ವದೇಶಿ ಆರ್ಥಿಕ ಸಬಲೀಕರಣ ಸೇರಿದಂತೆ ಹಲವು ಕೆಲಸಗಳಲ್ಲಿ ಸಂಘ ತೊಡಗಿಸಿಕೊಂಡಿದೆ.

# ಸಂಘ-ಗಾಂಧಿ ಬಗ್ಗೆ ತಿಳಿಯದವರಿಂದ ಸಂಘದ ಮೇಲೆ ಆರೋಪ

• ಡಾ. ಮನಮೋಹನ್ ವೈದ್ಯ
ಮಾನ್ಯ ಸಹಸರಕಾರ್ಯವಾಹರು, ರಾ.ಸ್ವ.ಸಂಘ

ಚುನಾವಣಾ ರಣಕಹಳೆ ಮೊಳಗಿದೆ. ರಾಜಕೀಯ ನಾಯಕರು ತಮ್ಮ ತಮ್ಮ ಪಕ್ಷಗಳ ಸಂಸ್ಕೃತಿ, ಪರಂಪರೆಗನುಗುಣವಾಗಿ ಪ್ರಚಾರ ಭಾಷಣಗಳಲ್ಲಿ ತೊಡಗಿದ್ದಾರೆ. ಇಂತಹ ಪ್ರಚಾರ ಭಾಷಣವೊಂದರಲ್ಲಿ ಇತ್ತೀಚೆಗೆ ನಾಯಕರೊಬ್ಬರು ಈ ಚುನಾವಣೆಯ ಮುಖ ಚಹರೆ ಗಾಂಧೀ ಹಾಗೂ ಗೋಡ್ಸೆ ನಡುವಿನ ಆಯ್ಕೆಯೆಂದು ಬಣ್ಣಿಸಿದ್ದಾರೆ. ಗಾಂಧೀಜಿಯ ನೈಜ ಅನುಯಾಯಿಗಳು ಅವರ ಆದರ್ಶಗಳ ಬಗ್ಗೆ ಗಮನ ಹರಿಸುತ್ತಾರೆಯೇ ಹೊರತು, ಗೋಡ್ಸೆಯ ಹೆಸರನ್ನೂ ಪ್ರಸ್ತಾಪಿಸುವುದಿಲ್ಲ. ಸಂಘದಲ್ಲಿಯೂ ಅವರಿಗೆ ಗಾಂಧೀಜಿಯ ಕುರಿತಾದ ಚರ್ಚೆಗಳು ಸಾಕಷ್ಟು ನಡೆದಿವೆ, ಅವುಗಳಲ್ಲಿ ಪಾಲ್ಗೊಂಡಿದ್ದೇನೆ ಕೂಡ. ಆದರೆ ಅಲ್ಲೆಲ್ಲೂ ಗೋಡ್ಸೆಯ ಚರ್ಚೆ ನಡೆಯುವುದಿಲ್ಲ. ಮಹಾತ್ಮ ಗಾಂಧಿಯವರ ಜೀವನ, ಆದರ್ಶ, ಆಚಾರ-ವಿಚಾರಗಳಿಂದ ದೂರ ಉಳಿದುಕೊಂಡು, ಸಣ್ಣತನದಿಂದ ಕೂಡಿದ ತಮ್ಮ ರಾಜಕೀಯ ಲಾಭಕ್ಕಾಗಿ ಅವಿಧೇಯರಾಗಿ ಗಾಂಧೀಜಿಯವರ ಹೆಸರನ್ನು ಬಳಸಿಕೊಳ್ಳುವುದು ವಿಪರ್ಯಾಸ. ಸಂಘದ ಬಗ್ಗೆ ಸತ್ಯವನ್ನರಿಯದೇ ಮಾತನಾಡುವಂತೆ, ಗಾಂಧೀಜಿ ಜೊತೆಗಿನ ಆರೆಸ್ಸೆಸ್ಸಿನ ಸಂಬಂಧದ ಬಗ್ಗೆ ಕಿಂಚಿತ್ತೂ ತಿಳಿದುಕೊಳ್ಳದೆ, ಉಪಲಬ್ಧ ಮಾಹಿತಿಯನ್ನು ಪರಿಗಣಿಸದೇ ತರ್ಕ ಮುಂದಿಡುವುದು ತಪ್ಪು. ತಥಾಕಥಿತ ವಿದ್ವಾಂಸರೂ ಈ ಬಗ್ಗೆ ಹೆಚ್ಚು ಶೋಧನೆ ನಡೆಸದೆ ತಮ್ಮ ಲೇಖನಗಳನ್ನು ಸಿದ್ಧಪಡಿಸುತ್ತಾರೆ. ಯಾವುದೋ ಒಂದು ಸಿದ್ಧಾಂತದ ದೃಷ್ಟಿಕೋನದಿಂದ ಬರೆದ ಲೇಖನಗಳೇ ಇವರುಗಳ ಬರಹಗಳಿಗೆ ಆಕರ. ಆದರೆ ಇಂತಹ ಹಲವು ಮೂಲಗಳಿಂದ ಆಯ್ದು ಬರೆದ/ಮಾತನಾಡಿದ ವಿಷಯಗಳು ಸತ್ಯಕ್ಕೆ ದೂರವಾಗಿವೆ.

ಅದ್ದರಿಂದ ಗಾಂಧೀಜಿ ಹಾಗೂ ಆರೆಸ್ಸೆಸ್ ಸಂಬಂಧದ ಬಗ್ಗೆ ಇರುವ ಮಾಹಿತಿಯನ್ನು ಆಮೂಲಾಗ್ರವಾಗಿ ಪರಿಗಣಿಸುವುದು ಒಳಿತು. ಮೂಲಭೂತವಾದಿ ಹಾಗೂ ಜಿಹಾದಿ ಶಕ್ತಿಗಳ ಬಗ್ಗೆ ಗಾಂಧೀಜಿಯವರ ಮೃದು ಧೋರಣೆಯನ್ನು ಸಂಘ ಒಪ್ಪದಿದ್ದರೂ ಮಹಾತ್ಮ ಗಾಂಧೀಜಿಯವರ ಚರಕ, ಸತ್ಯಾಗ್ರಹದಂತಹ ಪ್ರಯೋಗಗಳು ಜನಸಾಮಾನ್ಯರನ್ನು ಆಕರ್ಷಿಸಿ ಹಾಗೂ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ದೇಶದ ಜನರನ್ನು ಒಗ್ಗೂಡಿಸಿದ ಮಹಾತ್ಮರೆಂಬುದನ್ನು ಆರೆಸ್ಸೆಸ್ ಸ್ವೀಕರಿಸುತ್ತದೆ. ಅಲ್ಲದೆ ಬಹುಮಾನ್ಯ [?] ಆದರಣೀಯರೆಂದು ಪರಿಗಣಿಸುತ್ತದೆ.

ಗ್ರಾಮ ಸ್ವರಾಜ್ಯ, ಸ್ವದೇಶಿ, ಗೋ ಸಂರಕ್ಷಣೆ, ಅಸ್ಪೃಶ್ಯತೆಯಂತಹ ಸಂಘಟನಾತ್ಮಕ ಚಟುವಟಿಕೆಗಳಲ್ಲಿ ಗಾಂಧೀಜಿ ತೋರಿದ ಅನನ್ಯ ಶ್ರದ್ಧೆ ಹಾಗೂ ಅವುಗಳನ್ನು ಮುನ್ನಡೆಸಬೇಕೆಂಬ ತಮ್ಮ ಆಗ್ರಹ ಸನಾತನ ಹಿಂದೂ ಚಿಂತನೆಯ ಬಗ್ಗೆ ನಡೆಸಿದ ವ್ಯಕ್ತ ಹಾಗೂ ಅವರ ಯತ್ನವನ್ನೂ ಯಾರೂ ಅಲ್ಲಗಳೆಯುವಂತಿಲ್ಲ. ಗಾಂಧೀಜಿಯವರ ಮೌಲ್ಯಾಧಾರಿತ ಜೀವನದಿಂದ ಪ್ರೇರಣೆ ಪಡೆದು ಅಂದಿನ ಯುವಜನರು ದೇಶ ಸೇವೆಗಾಗಿ ಜೀವನವನ್ನೇ ಮುಡಿಪಾಗಿಟ್ಟರು. ಆರೆಸ್ಸೆಸ್ ಸಂಸ್ಥಾಪಕರಾದ ಡಾ. ಹೆಡಗೇವಾರ್ 1921ರ ಅಸಹಕಾರ ಚಳವಳಿ ಹಾಗೂ 1930ರ ಕಾನೂನು ಭಂಗ (ಜಂಗಲ್ ಸತ್ಯಾಗ್ರಹ) ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಹೀಗೆ ಪಾಲ್ಗೊಂಡಿದ್ದಕ್ಕೆ 19 ಆಗಸ್ಟ್‌ನಿಂದ 12 ಜುಲೈ ಹಾಗೂ 21 ಜುಲೈ 1930ರಿಂದ 14 ಫೆಬ್ರವರಿ 1931ರವರೆಗೆ ಎರಡು ಬಾರಿ ಜೈಲುವಾಸವನ್ನು ಅನುಭವಿಸಿದರು.

18 ಮಾರ್ಚ್ 1922ರಲ್ಲಿ ಗಾಂಧೀಜಿಯವರನ್ನು 6 ವರ್ಷಗಳ ಕಾಲ ಜೈಲಿನಲ್ಲಿ ಬಂಧಿಸಲಾಯಿತು. ಪ್ರತಿ ತಿಂಗಳ 18ರಂದು ಗಾಂಧೀ ದಿವಸ ಎಂದು ಆಚರಿಸಲು ದೇಶವೇ ಮುಂದಾಯಿತು. ಗಾಂಧೀಜಿಯವರು ಸೆರೆವಾಸ ಅನುಭವಿಸುತ್ತಿದ್ದಾಗ ಅವರ ಅನುಯಾಯಿಗಳು ದೇಶಭಕ್ತಿಯ ಹೆಸರಿನಲ್ಲಿ ಸ್ವಹಿತಾಸಕ್ತಿಯನ್ನು ಮೆರೆಯುತ್ತಿದ್ದರು. ಇದರ ವಿರುದ್ಧ ನಿಂತ ಡಾಕ್ಟರ್‌ಜೀ ಅ.18, 1922ರಂದು ಹೀಗೆಂದು ನುಡಿದಿದ್ದರು- "ಮಂಗಳಕರ ದಿನವಾದ ಇಂದು, ಮಹಾತ್ಮ ಗಾಂಧಿಯಂತಹ ಉದಾತ್ತ ಚಿಂತನೆಯ ಮನುಷ್ಯನ ಮೌಲ್ಯ ಹಾಗೂ ಗುಣಗಳನ್ನು ನೆನಪಿಸಿಕೊಂಡು ಆಚರಿಸುವ ದಿನವಾಗಬೇಕು. ಅವರ ಅನುಯಾಯಿಗಳೆಂದು ಕರೆದುಕೊಳ್ಳುವವರಿಗೆ ಹೆಚ್ಚಿನ ಜವಾಬ್ದಾರಿ ಈ ನಿಟ್ಟಿನಲ್ಲಿದೆ"

1934ರಲ್ಲಿ ಗಾಂಧೀಜಿ ಜಮುನಾಲಾಲ್ ಬಜಾಜ್‌ರ ಮನೆಯಲ್ಲಿ ತಂಗಿದ್ದರು. ಸಂಘದ ಶಿಬಿರ ಹತ್ತಿರದಲ್ಲೇ ಏರ್ಪಟ್ಟಿತ್ತು. ಅಲ್ಲಿಗೆ ಆಗಮಿಸಿ ಸ್ವಯಂಸೇವಕರ ಜೊತೆ ಸಂವಾದವನ್ನು ಗಾಂಧೀಜಿ ನಡೆಸಿದ್ದರು. ಸ್ವಯಂಸೇವಕರಲ್ಲಿ ಅಸ್ಪೃಶ್ಯ ಜಾತಿಯವರು ಇರುವುದನ್ನು ಹಾಗೂ ಎಲ್ಲರೂ ಸೋದರಭಾವದಿಂದ ಬೆರೆಯುವುದನ್ನು ಕಂಡು ಗಾಂಧೀಜಿ ಸಂತಸ ವ್ಯಕ್ತಪಡಿಸಿದ್ದರು. ಸ್ವಾತಂತ್ರ್ಯಾನಂತರದಲ್ಲಿ ಗಾಂಧೀಜಿ ವಾಸಿಸುತ್ತಿದ್ದ ಭಂಗಿ ಕಾಲೋನಿಯ ತಮ್ಮ ನಿವಾಸದ ಎದುರು ಸಂಘದ ಶಾಖೆಯೊಂದು ನಡೆಯುತ್ತಿತ್ತು. ಗಾಂಧೀಜಿಯವರ ಅಪೇಕ್ಷೆಯಂತೆ ಮುಂಚೂಣಿ ಸ್ತರದ ಕಾರ್ಯಕರ್ತರನ್ನೊಳಗೊಂಡ 500ಕ್ಕೂ ಹೆಚ್ಚು ಸ್ವಯಂಸೇವಕರನ್ನು ಉದ್ದೇಶಿಸಿ ಅವರು ಮಾತನಾಡಿದರು. ತಮ್ಮ ಭಾಷಣದಲ್ಲಿ "ಹಿಂದೊಮ್ಮೆ ವಾರ್ಧಾದಲ್ಲಿನ ಆರೆಸ್ಸೆಸ್ ಶಿಬಿರವೊಂದಕ್ಕೆ ನಾನು ಭೇಟಿ ನೀಡಿದ್ದೆ. ಆಗ ಡಾ. ಹೆಡಗೇವಾರರೂ ನಮ್ಮ ಜೊತೆಗಿದ್ದರು. ಜಮುನಾಲಾಲ್ ಬಜಾಜ್ ನನ್ನನ್ನು ಅಲ್ಲಿಗೆ ಕರೆದೊಯ್ದಿದ್ದರು. ಶಿಬಿರದಲ್ಲಿನ ಸರಳತೆ, ಶಿಸ್ತು, ಬಂಧುಗಳಲ್ಲಿ ಅಸ್ಪೃಶ್ಯತೆಯ ಭಾವನೆ ಇಲ್ಲದಿರುವುದನ್ನು ಕಂಡು ನನಗೆ ಸಂತಸವುಂಟಾಗಿತ್ತು. ಅಂದು ಸಂಘವು ಬಹುವಾಗಿ ಬೆಳೆದಿದೆ. ಯಾವುದೇ ಸಂಘಟನೆಯು ಸೇವಾ ಮನೋಭಾವ ಹಾಗೂ ತ್ಯಾಗದ ಆದರ್ಶಗಳನ್ನು ಮೈಗೂಡಿಸಿಕೊಂಡಿರುತ್ತವೆಯೋ ಅಂತಹ ಸಂಘಟನೆ ಶಕ್ತಿಯುತವಾಗಿ ಬೆಳೆಯುತ್ತದೆ" ಎಂದು ನುಡಿದಿದ್ದರು. (ಕಂಪ್ಲೀಟ್ ವರ್ಕ್ಸ್ ಆಫ್ ಗಾಂಧೀ ಪುಸ್ತಕದಲ್ಲಿ, 193–194 ಪುಟದಲ್ಲಿ ಪ್ರಕಟಿತ)

30 ಜನವರಿ 1948ರಲ್ಲಿ ಗಾಂಧೀಜಿಯವರ ಹತ್ಯೆಯಾದಾಗ, ಅಂದಿನ ಸರಸಂಘಚಾಲಕರಾಗಿದ್ದ ಗುರೂಜಿಯವರು ಸಂತಾಪಸೂಚಕ ಪತ್ರವನ್ನು ಟೆಲಿಗ್ರಾಮ್ ಮುಖಾಂತರ ದೇವದಾಸ ಗಾಂಧಿ, ಪಂಡಿತ ಜವಾಹರಲಾಲ್ ನೆಹರು, ಸರ್ದಾರ್ ವಲ್ಲಭಭಾಯಿ ಪಟೇಲರಿಗೆ ಕಳುಹಿಸಿದ್ದರು. ಟೆಲಿಗ್ರಾಮ್‌ನಲ್ಲಿ "ಕ್ರೂರ ದಾಳಿಯ ಸುದ್ದಿ ಹಾಗೂ ಮಹಾನ್ ವ್ಯಕ್ತಿಯ ದುರಂತ ಸಾವಿನಿಂದ ದಿಗ್ಭ್ರಾಂತಗೊಂಡಿದೆ. ದೇಶಕ್ಕಾದ ನಷ್ಟ ಅಪರಿಮಿತ. ಈ ಸಾವಿನಿಂದ ಉಂಟಾಗುವ ವ್ಯಾಕುಲತೆಯಿಂದ ಹೊರಬರಲು, ಹೆಚ್ಚಿನ ಜವಾಬ್ದಾರಿ ನಮ್ಮ ಮೇಲಿರುವುದು ಅವರನ್ನು ಭುಜಗಳ ಮೇಲೆ ಹೊರಲು ಸಹಾಯವನ್ನು ಭಗವಂತ ನೀಡುವಂತಾಗಲಿ" ಎಂದಿತ್ತು.

ಸ್ವಯಂಸೇವಕರಿಗೆ 13 ದಿನಗಳ ಕಾಲ ಸಂಘದ ಎಲ್ಲಾ ಚಟುವಟಿಕೆಗಳನ್ನು ಸ್ಥಗಿತಗೊಳಿಸಲು ಕರೆ ನೀಡಿ, ತಮ್ಮ ಪ್ರವಾಸವನ್ನು ಮೊಟಕುಗೊಳಿಸಿ ನಾಗಪುರಕ್ಕೆ ಗುರೂಜಿ ವಾಪಸ್ಸಾದರು. 31 ಜನವರಿಯಂದು ಅಂದಿನ ಪ್ರಧಾನಿ ಹಾಗೂ ಗೃಹಮಂತ್ರಿಗಳಿಗೆ ಗುರೂಜಿ ಪತ್ರವೊಂದನ್ನು ಬರೆದರು. ಅವರು ಬರೆದಂತೆ "ನಿನ್ನೆ ಮದ್ರಾಸಿನಲ್ಲಿದ್ದಾಗ ಭಾವಶೂನ್ಯ, ವ್ಯಕ್ತಿಯೊಬ್ಬ ಭಯಂಕರ ರೀತಿಯಲ್ಲಿ ಪೂಜ್ಯ ಮಹಾತ್ಮಜೀಯವರ ಜೀವವನ್ನು ಕೊನೆಗೊಳಿಸಿ ದುಷ್ಟ ಕ್ರಿಯೆಯೊಂದನ್ನು ಎಸಗಿದ್ದಾನೆ. ಈ ಅಸಹನೀಯ ಕೃತ್ಯವು ನಮ್ಮ ಸಮಾಜವನ್ನು ನೋಡುವ ಜಾಗತಿಕ ಕಣ್ಣುಗಳಲ್ಲಿ ಒಂದು ಅಸಹಜವಾದ ಕಳೆಯಾಗಿದೆ" ಈ ವಿಷಯದ ಸಂಪೂರ್ಣ ಪತ್ರವ್ಯವಹಾರವು ಗುರೂಜಿ ಸಮಗ್ರ ಪುಸ್ತಕದಲ್ಲಿ ದಾಖಲಾಗಿದೆ.

ಗಾಂಧೀಜಿಯವರ ಜನ್ಮಶತಾಬ್ದಿಯ ಅಂಗವಾಗಿ ಸಾಂಗ್ಲಿಯಲ್ಲಿ ಅವರ ಪ್ರತಿಮೆಯ ಅನಾವರಣವನ್ನು ಗುರೂಜಿಯವರೇ ನೆರವೇರಿಸಿದರು. ತಮ್ಮ ಭಾಷಣದಲ್ಲಿ "ಗಾಂಧೀಜಿಯವರ 100 ವರ್ಷದ ಜನ್ಮ ದಿನವನ್ನು ಆಚರಿಸಲು ನಾವೆಲ್ಲರೂ ಸೇರಿದ್ದೇವೆ. ನೂರು ವರ್ಷಗಳ ಕೆಳಗೆ ಸೌರಾಷ್ಟ್ರದಲ್ಲಿ ಒಬ್ಬ ಬಾಲಕ ಜನಿಸಿದ. ಅದೇ ದಿನವೇ ನೂರಾರು ಮಕ್ಕಳು ಹುಟ್ಟಿರಲಿಕ್ಕೂ ಸಾಕು. ಮಹಾತ್ಮ ಗಾಂಧೀ ಎಲ್ಲರಂತೆ ಸಾಮಾನ್ಯ ಮನುಷ್ಯನಾಗಿ ಜನಿಸಿದವರು. ತಾವು ನಡೆದ ದಾರಿ, ನಿಂತ ಆದರ್ಶಗಳಿಂದಾಗಿ ಮಹಾತ್ಮರಾಗಿ ಜನರ ಪ್ರೀತಿಗೆ ಪಾತ್ರರಾದವರು. ನಮ್ಮ ಜೀವನವನ್ನು ಅವರು ನಡೆಸಿದಂತೆಯೇ ನಡೆಸಬೇಕು ಹಾಗೂ ಸಾಧ್ಯವಾದಷ್ಟು ರೀತಿಯಲ್ಲಿ ಅವರನ್ನು ಅನುಕರಿಸುವುದನ್ನು ಪ್ರಯತ್ನಿಸಬೇಕು. ಮಹಾತ್ಮ ಗಾಂಧೀ ಧೋತಿಯಿಂದ ಚಿತ್ತವನ್ನು [?] ತೆರೆದವರು. ಸಾಮಾನ್ಯ ಮನುಷ್ಯರನ್ನು ಅಸಾಮಾನ್ಯರನ್ನಾಗಿ ಪರಿವರ್ತಿಸಿದವರು. ಇದೇ ಕಾರಣದಿಂದಾಗಿ ಬ್ರಿಟಿಷರು ದೇಶವನ್ನು ಬಿಟ್ಟು ಓಡಿದ್ದು" ಎಂದರು. ಮುಂದೆ ಮಹಾತ್ಮಾಜಿಯವರ ಮಾತುಗಳನ್ನು ಆಡುತ್ತಾ "ನಾನೊಬ್ಬ ನಿಷ್ಠಾವಂತ ಹಿಂದೂ. ಅದ್ದರಿಂದ ನಾನು ಜೀವನದ ಅಭಿವ್ಯಕ್ತಿಯನ್ನೂ ಮನುಷ್ಯರನ್ನಲ್ಲದೇ ಎಲ್ಲವನ್ನೂ ಪ್ರೀತಿಸುತ್ತೇನೆ" ಎಂದರು. ಗುರೂಜಿ ಮಹಾತ್ಮ ಗಾಂಧೀಜಿಯವರು ತಮ್ಮ ಜೀವನದಲ್ಲಿ, ರಾಜಕೀಯದಲ್ಲಿ ನಿತ್ಯ ಅಹಿಂಸೆಗೆ ಪ್ರಾಮುಖ್ಯತೆ ದೊರಕಿಸಿಕೊಂಡಿದ್ದು ಹಿಂದುತ್ವದಿಂದಲೇ ಎಂದು ಹೇಳಿದ್ದರು.

"ದೇಶಕ್ಕೆ ರಾಜಕೀಯ ಹಾಗೂ ಆರ್ಥಿಕ ಸ್ವಾತಂತ್ರ್ಯದ ಅಗತ್ಯವಿದೆ. ಧಾರ್ಮಿಕ ಸ್ವಾತಂತ್ರ್ಯದ ಅಗತ್ಯವೂ ಇದೆ. ಎಲ್ಲಾ ಧರ್ಮ, ಜಾತಿ, ಉಪಜಾತಿಯ ಜನರೂ ಸಾಮರಸ್ಯದಿಂದ ಬಾಳುವಂತಾಗಬೇಕು. ನಮಗೆ ಸ್ವಾತಂತ್ರ್ಯ ದೊರೆಯಬೇಕಿರುವುದು ಪಾಶ್ಚಾತ್ಯ ಚಿಂತನೆಗಳಿಂದ" ಎಂದು ಪ್ರಬಲವಾಗಿ ಗಾಂಧೀಜಿ ನಂಬಿದ್ದರು ಹಾಗೂ ಅದನ್ನೇ ಪ್ರತಿಪಾದಿಸುತ್ತಿದ್ದರು. ನಾನು ಗಾಂಧೀಜಿಯವರೊಂದಿಗೆ ಹಲವಾರು ಬಾರಿ ಒಡನಾಡಿದ್ದೇನೆ. ಚರ್ಚಿಸಿದ್ದೇನೆ. ನಾನೀಗ ಮಾತನಾಡುತ್ತಿರುವುದು ಗಾಂಧೀಜಿಯವರನ್ನು ಸಮಗ್ರವಾಗಿ ಅರ್ಥೈಸಿಕೊಂಡ ಬಳಿಕವೇ. ಅದಕಾರಣವೇ ನನಗೆ ಅವರ ಬಗ್ಗೆ ಅಪಾರ ಶ್ರದ್ಧೆ, ಗೌರವಾದರಗಳು ಇವೆ" ಎಂದು ಗುರೂಜಿ ಹೇಳಿದ್ದರು. "ಹಿಂದುತ್ವದ ಭವಿಷ್ಯದ ಕುರಿತಾಗಿ ಗಾಂಧೀಜಿ ಹೇಳಿದ್ದು- "ಹಿಂದುತ್ವವೆಂದರೆ, ಸ್ಥಗಿತಗೊಳ್ಳುವಂಥದ್ದಲ್ಲ. ಬದಲಾಗಿ ನಿರಂತರವಾಗಿ ಬೆಳೆಯುವಂಥದ್ದು. ಸತ್ಯದ ಮಾರ್ಗವನ್ನು ತೋರಿಸುವಂಥದ್ದು. ಇಂದು ಹಿಂದೂ ಧರ್ಮ ಆಯಾಸಗೊಂಡಂತಾಗಿದೆ. ಮುಂದೆ ಹೋಗುವುದು ಕಷ್ಟವೆಂಬಂತೆ ತೋರುತ್ತಿದೆ. ಆದರೆ ಒಂದು ದಿನ ಈ ಆಯಾಸ ಮುಗಿದ ಬಳಿಕ ಹಿಂದುತ್ವ ಹಿಂದೆಂದೂ ಕಂಡದ್ದಕ್ಕಿಂತ ಉಜ್ವಲವಾಗಿ ಪ್ರಕಾಶಿಸತೊಡಗುತ್ತದೆ. ಇಡೀ ವಿಶ್ವಕ್ಕೆ ಬೆಳಕು ನೀಡುವಂತಹ ಧರ್ಮ ಹಿಂದುತ್ವವಾಗುತ್ತದೆ. ಮಹಾತ್ಮ ಗಾಂಧಿಯವರ ಈ ಭವಿಷ್ಯವಾಣಿಯನ್ನು ಪೂರ್ಣಗೊಳಿಸುವ ಜವಾಬ್ದಾರಿ ನಮ್ಮ ಮೇಲಿದೆ." ಎಂದು ಗುರೂಜಿ ತಮ್ಮ ಭಾಷಣದಲ್ಲಿ ತಿಳಿಸಿದ್ದರು.

ನಮ್ಮಿಬ್ಬರ ಕೊನೆಯ ಭೇಟಿ 1947ರಲ್ಲಿ ನಡೆದದ್ದು. ದಿಲ್ಲಿಯಲ್ಲಿ ಸ್ವಾತಂತ್ರ್ಯದ ನಂತರ ದಂಗೆಗಳು ಆರಂಭಗೊಂಡಿತ್ತು. ಜನಸಾಮಾನ್ಯರನ್ನೂ ಅಹಿಂಸೆಯ ಮಾರ್ಗವನ್ನವಲಂಬಿಸಿದವರೂ ಕ್ರೂರ, ನಿರ್ದಯ, ರಾಕ್ಷಸೀ ಪ್ರವೃತ್ತಿಯವರಾದರು. ಶಾಂತಿಯ ಮರುಸ್ಥಾಪನೆಗಾಗಿ ನಾನೂ ನನ್ನ ಕೆಲಸ ಮಾಡುತ್ತಿದ್ದೆ. ಆ ಸಂದರ್ಭದಲ್ಲಿ ಮಹಾತ್ಮ ಗಾಂಧಿಯವರನ್ನು ಭೇಟಿಯಾದಾಗ, ಅವರು ಹೇಳಿದ್ದರು ? "ಏನು ನಡೆಯುತ್ತಿದೆಯೆಂದು ನೋಡಿದಿರಾ?" ಅದಕ್ಕೆ ಉತ್ತರವಾಗಿ, ನಾನು, "ಇದು ದುರ್ದೈವದ ಸಂಗತಿ. ಬ್ರಿಟಿಷರು ತಾವು ಭಾರತ ಬಿಟ್ಟು ಹೊರಹೋದಾಗ ನೀವೆಲ್ಲರೂ ಒಬ್ಬರನ್ನೊಬ್ಬರು ಕೊಲ್ಲುತ್ತೀರಿ ಎಂದು ಹೇಳಿದ್ದರು. ಅಂತೆಯೇ ನಡೆಯುತ್ತಿದೆ. ಈ ಘಟನೆಗಳಿಂದಾಗಿ ವಿಶ್ವದ ಕಣ್ಣುಗಳಲ್ಲಿ ನಮ್ಮ ದೇಶಕ್ಕೆ ಅವಮಾನವಾಗುತ್ತಿದೆ." ಎಂದು ಹೇಳಿದ್ದೆ. ಅಂದಿನ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿ ಮಾತನಾಡುತ್ತ ನನ್ನ ಹೆಸರನ್ನು ಉಲ್ಲೇಖಿಸಿ ಗರ್ವದಿಂದ ಮಾತನಾಡಿದ್ದರು.

ಮಹಾತ್ಮ ಗಾಂಧಿಯವರ ಚಿಂತನೆಗಳನ್ನು ರೂಢಿಸಿಕೊಂಡರೆ ಹಿಂದೂ ಧರ್ಮದ ಪುನರ್ ಜಾಗೃತಿ ಸಾಧ್ಯ. ಧರ್ಮದ ವಿನಾ ಮಾನವ ಸಮಾಜವು ಪ್ರಾಣಿಗಳನ್ನೊಳಗೊಂಡ, ಒಬ್ಬರ ವಿನಾಶಕ್ಕೆ ಇನ್ನೊಬ್ಬ ಹೊಂಚು ಹಾಕುವಂತಿರುತ್ತದೆ. ಹಿಂದೂ ಧರ್ಮದ ಜಾಗೃತಿಯಿಂದಾಗಿ ಪ್ರತಿಯೊಬ್ಬನೂ ಸದ್ಗುಣಗಳನ್ನು ಆಚರಿಸುವಲ್ಲಿ, ವಿಶ್ವವು ನಮ್ಮನ್ನು ಗಮನಿಸುತ್ತಿರುವಾಗ, ನಾವು ಒಂದು ಆದರ್ಶ ಸಮಾಜವಾಗಿ, ಎಲ್ಲರನ್ನೂ ಪ್ರೀತಿಸುವ, ಸಾಮರಸ್ಯದಿಂದ ಕೂಡಿದ ದೇಶವಾಗಿ ಹೊರಹೊಮ್ಮಬೇಕು. ಆದ್ದರಿಂದಲೇ ಗಾಂಧೀಜಿಯವರನ್ನು ಪೂಜ್ಯ ಭಾವದಿಂದ ನೋಡಬೇಕು ಹಾಗೂ ಅನುಸರಿಸಬೇಕು.

ಈ ಭಾಷಣದ ಪೂರ್ಣ ಪಾಠ ಗುರೂಜಿ ಸಮಗ್ರ ಪುಸ್ತಕದಲ್ಲಿ ದಾಖಲಾಗಿದೆ. (ಸಂಪುಟ 1, ಪುಟ 208–221)

1987–90ರಲ್ಲಿ ವಡೋದರಾದಲ್ಲಿ ನಾನು ಪ್ರಚಾರಕನಾಗಿದ್ದಾಗ ಯಾದವರಾವ್ ಜೋಶಿಯವರ ಭಾಷಣವನ್ನು ಕೇಳಿದ ನೆನಪಿದೆ. ಗಾಂಧೀಜಿಯವರ ಬಗ್ಗೆ ಭಾವುಕವಾಗಿ ಹಾಗೂ ಅವರ ಕಾರ್ಯದ ಬಗ್ಗೆ ಹಿರಿದಾಗಿ ಮಾತನಾಡುತ್ತಿದ್ದ ಜೋಶಿಯವರನ್ನು ಕಾರ್ಯಕರ್ತನೊಬ್ಬನು ಹೃದಯದಿಂದ ಮಾತನಾಡುತ್ತಿದ್ದೀರಾ? ಎಂದು ಪ್ರಶ್ನಿಸಿದರು. ಅದಕ್ಕೆ ಯಾದವರಾವ್ ಜೋಶಿಯವರು, "ನಾನೊಬ್ಬ ರಾಜಕೀಯ ನೇತಾರನಲ್ಲ. ಆದ್ದರಿಂದ ನಾನು ಹೃದಯ ನಂಬದ ಮಾತುಗಳನ್ನು ಆಡುವುದಿಲ್ಲ. ಯಾರನ್ನಾದರೂ ಆದರಿಸುತ್ತೇನೆಂದರೆ ಅವರ ಎಲ್ಲಾ ಚಿಂತನೆಗಳನ್ನು ಒಪ್ಪಿಕೊಳ್ಳುತ್ತೇನೆಂದಲ್ಲ. ಆದರೆ ಅವರ ಆದರ್ಶ, ಪ್ರೇರಣಾದಾಯಿ ಗುಣಗಳನ್ನು ಸ್ವೀಕರಿಸುತ್ತೇನೆ" ಎಂದು ನುಡಿದರು. ಮಾತನಾಡುತ್ತ ಮಹಾಭಾರತದ ಭೀಷ್ಮರನ್ನು ಕುರಿತು, "ಭೀಷ್ಮರನ್ನು ನಾವು ತೆಗೆದುಕೊಂಡ ಪ್ರತಿಜ್ಞೆಗಾಗಿ, ಹಾಗೂ ಅದನ್ನು ಉಳಿಸಿಕೊಳ್ಳಲು ತೋರಿದ ಬದ್ಧತೆಗಾಗಿ ಸ್ಮರಿಸಿಕೊಳ್ಳುತ್ತೇವೆಯೇ ಆಗಲಿ ದ್ರೌಪದಿಯನ್ನು ಕೌರವರು ಅವಮಾನಿಸಿದಾಗ ಮೌನ ತಳೆದದ್ದಕ್ಕಲ್ಲ. ಅದೇ ತರದಲ್ಲಿ ಗಾಂಧಿಯವರ ಜಿಹಾದಿ ಮುಸ್ಲಿಮ್ ನಾಯಕತ್ವದೊಂದಿಗಿದ್ದ ಮೃದು ಧೋರಣೆ, ಅವರೊಂದಿಗಿನ ಕಾರ್ಯವಿಧಾನದ ವಿಷಯವಾಗಿ ಸಾಕಷ್ಟು ಭಿನ್ನಾಭಿಪ್ರಾಯವಿದ್ದಾಗಿಯೂ, ಸತ್ಯಾಗ್ರಹ ಸೇರಿದಂತೆ ಭಾರತೀಯ ಚಿಂತನೆಯನ್ನಾಧರಿಸಿದ ಹಲವು ವಿಷಯಗಳಲ್ಲಿನ ನಿಲುವುಗಳು ಶ್ಲಾಘನೀಯ ಹಾಗೂ ಪ್ರೇರಣಾದಾಯಿ." ಎಂದು ಯಾದವರಾವ್ ಜೋಶಿ ಅಂದು ಮಾತನಾಡಿದ್ದರು.

ಇಂತಹ ಸಂಗತಿಗಳನ್ನು ಪರಿಗಣಿಸದೆ ಗಾಂಧೀಜಿ ವಿಷಯವಾಗಿ ಸಂಘದ ಬಗ್ಗೆ ಹಗುರವಾಗಿ ಮಾತನಾಡುವುದು ಸತ್ಯಕ್ಕೆ ಮಾಡುವ ಅಪಚಾರ. ಗಾಂಧೀಜಿಯವರ ಆದರ್ಶಗಳನ್ನು ಸಂಘವು ಉಳಿಸಿಕೊಂಡು ಬಂದಿದೆಯಲ್ಲದೇ, ಅವರದೇ ಚಿಂತನೆಗಳಾದ ಗ್ರಾಮ ವಿಕಾಸ, ಸಾವಯವ ಕೃಷಿ, ಗೋ ಸಂರಕ್ಷಣೆ, ಸಾಮಾಜಿಕ ಸಾಮರಸ್ಯ, ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಮಕ್ಕಳಿಗೆ ಒದಗಿಸಬೇಕೆಂಬ ನಿಲುವು, ಸ್ವದೇಶಿ ಆಚಾರ, ಪ್ರಚಾರ ತನ್ಮೂಲಕ ಸ್ವದೇಶಿ ಆರ್ಥಿಕ ಸಬಲೀಕರಣ ಸೇರಿದಂತೆ ಹಲವು ಕೆಲಸಗಳಲ್ಲಿ ಸಂಘ ತೊಡಗಿಸಿಕೊಂಡಿದೆ. ಚುನಾವಣಾ ಸಮಯದಲ್ಲಿ ಮಾತ್ರವೇ ನೆನಪಾಗುವ ಗಾಂಧಿಗಿಂತಲೂ ಇದು ಮಹತ್ತರವಾದ ಕೆಲಸವೇ ಆಗಿದೆ.

ಗಾಂಧೀಜಿಯವರ 150ನೇ ಜನ್ಮ ವಾರ್ಷಿಕೋತ್ಸವದ ವರ್ಷ. ಶ್ರೇಷ್ಠ ಸಂತನಿಗೆ ಈ ಮೂಲಕ ನಮ್ಮ ನಮನಗಳನ್ನು ಸಲ್ಲಿಸೋಣ.

# ಸಾಮಾನ್ಯ ನಾಗರಿಕರಲ್ಲಿರುವ ಶಿಷ್ಟಾಚಾರ, ರಾಷ್ಟ್ರಹಿತ ರಾಜಕಾರಣಿಗಳಲ್ಲೇಕೆ ಇಲ್ಲ?

• ಬೈಂದೂರು ಚಂದ್ರಶೇಖರ ನಾವಡ

ಅಧಿಕಾರಕ್ಕಾಗಿ ನಡೆಯುವ ಸಂಘರ್ಷದ ವೃತ್ತಾಂತಗಳಿಂದ ಇತಿಹಾಸದ ಪುಟಗಳು ತುಂಬಿಕೊಂಡಿವೆ. ಪ್ರಭುತ್ವಕ್ಕಾಗಿ ಸಂಬಂಧಗಳೂ ಬಲಿಯಾದ ಅದೆಷ್ಟೋ ಉದಾಹರಣೆಗಳು ಇತಿಹಾಸದಲ್ಲಿ ಕಾಣಸಿಗುತ್ತವೆ. ಗದ್ದುಗೆಗಾಗಿ ತಮ್ಮೊಳಗೆ ಯುದ್ಧ ಮಾಡಿದ ಸಹೋದರರ, ತಂದೆಯನ್ನು ಕತ್ತಲ ಕೋಣೆಗೆ ನೂಕಿದ ಪುತ್ರನ ಕ್ರೂರತನವನ್ನೂ ಇತಿಹಾಸ ಕಂಡಿದೆ. ವರ್ತಮಾನದಲ್ಲಿ ನಾವು ಒಪ್ಪಿ ಕೊಂಡ ಪ್ರಜಾಪ್ರಭುತ್ವದಲ್ಲೂ ರಾಜಕಾರಣಿಗಳ ವರ್ತನೆ ಗತಕಾಲದ ಇತಿಹಾಸಕ್ಕಿಂತ ಭಿನ್ನವಾಗಿಲ್ಲ. ವರ್ತಮಾನ ಪರಿಸ್ಥಿತಿಯಲ್ಲಿ ರಾಜಕಾರಣಿಗಳಿಗಿಂತ ಸಾಮಾನ್ಯ ನಾಗರಿಕರೇ ವಾಸಿ. ನಮ್ಮ ರಾಜಕಾರಣಿಗಳ ಅಧಿಕಾರ ದಾಹ, ದುರ್ವರ್ತನೆ, ದೇಶ ಹಿತ ಬಲಿ ಕೊಟ್ಟಾದರೂ ಸರಿ ಅಧಿಕಾರ ಪಡೆಯಬೇಕೆನ್ನುವ ಪರಿಸ ಅತ್ಯಂತ ಹೀನಾಯ ಎನ್ನದೇ ವಿಧಿಯಿಲ್ಲ.

ಪ್ರಸ್ತುತ ನಡೆಯುತ್ತಿರುವ ಲೋಕಸಭಾ ಚುನಾವಣೆ ಕೆಟ್ಟ ಸ್ತರದ ರಾಜಕಾರಣದ ಮಾದರಿಯನ್ನು ಮುನ್ನೆಲೆಗೆ ತಂದಿದೆ. ಇತರರನ್ನು ಹೀನಾಯವಾಗಿ ಹಳಿಯುವ, ಅಸಭ್ಯ ವಾಕ್ಯಗಳಿಂದ ನಿಂದಿಸುವ ರಾಜಕಾರಣಿಗಳಿಂದ ಚುನಾವಣಾ ಪ್ರಕ್ರಿಯೆ ಕಲುಷಿತವಾಗಿದೆ. ಭ್ರಷ್ಟಾಚಾರ, ಕುಟುಂಬ ರಾಜಕಾರಣದಲ್ಲಿ ಮುಳುಗಿರುವವರಿಗೆ ಹೇಗಾದರೂ ಮಾಡಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ತವಕ ಇನ್ನಿಲ್ಲದಂತೆ ಕಾಡುತ್ತಿದೆ ಎನ್ನುವುದು ಸ್ಪಷ್ಟವಾಗಿ ಕಾಣುತ್ತಿದೆ. ಸಾಮಾನ್ಯ ನಾಗರಿಕರಲ್ಲಿ ದೇಶಭಕ್ತಿಯ ಸೆಲೆ ಇನ್ನೂ ಬತ್ತಿಲ್ಲ ಎನ್ನುವುದೇ ಈ ಹೊತ್ತಿನಲ್ಲಿ ಸಮಾಧಾನ ಕೊಡುವಂತಹದ್ದು. ಅಪನಗದೀಕರಣವಿರಲಿ ಅಥವಾ ಜಿಎಸ್‌ಟಿ ಜಾರಿಯ ಹಂತದ ಪ್ರಾರಂಭಿಕ ತೊಂದರೆಗಳನ್ನು ಎದುರಿಸುವಾಗಲೆಲ್ಲಾ ಸಾಮಾನ್ಯ ವರ್ಗದ ನಾಗರಿಕರು ದೇಶ ಹಿತಕ್ಕಾಗಿ ತಾವು ತ್ಯಾಗ ಮಾಡಲು ಸಿದ್ಧ ಎಂದಿದ್ದು ಇನ್ನೂ ಮಾಸಿಲ್ಲ. ಕಾರ್ಗಿಲ್ ಯುದ್ಧ ಮತ್ತು ಆಪರೇಶನ್ ಪರಾಕ್ರಮ್ ಸಂದರ್ಭದಲ್ಲಿ ಗಡಿಯತ್ತ ತೆರಳುತ್ತಿದ್ದ ಸೈನಿಕರಿಗೆ ರೈಲ್ವೇ ಸ್ಟೇಷನ್‌ಗಳಲ್ಲಿ ತಿಲಕವಿಟ್ಟು ಬೀಳ್ಕೊಟ್ಟ ರಾಷ್ಟ್ರಾಭಿಮಾನಿ ನಾಗರಿಕರು ಖಂಡಿತಾ ನಮ್ಮ ಜನಪ್ರತಿನಿಧಿಗಳಿಗಿಂತ ಹೆಚ್ಚು ರಾಷ್ಟ್ರಪ್ರೇಮಿಗಳು ಎನ್ನುವುದರಲ್ಲಿ ಸಂಶಯವಿಲ್ಲ.

ಆಧುನಿಕ ಪಾಶ್ಚಾತ್ಯ ಶಿಕ್ಷಣ ನಮ್ಮನ್ನು ಸ್ವಾರ್ಥಿ ಗಳನ್ನಾಗಿಸುತ್ತಿದೆ ಎಂದು ಹೇಳಲಾಗುತ್ತಿರುವುದರಲ್ಲಿ ತಪ್ಪೇನೂ ಇಲ್ಲ ಎನಿಸುತ್ತಿಲ್ಲವೇ? ಇಂದಿನ ನಮ್ಮ ಸಮಾಜದ ಹೆಚ್ಚೇನೂ ವಿದ್ಯಾವಂತ [?] ಶಿಕ್ಷಣವಿಲ್ಲದ ವ್ಯಕ್ತಿಯೋರ್ವನನ್ನು ಉಚ್ಚ ಶಿಕ್ಷಿತ ವ್ಯಕ್ತಿಯೊಂದಿಗೆ ತುಲನೆ ಮಾಡಿದಾಗ ಸುಶಿಕ್ಷಿತ ವ್ಯಕ್ತಿ ಕೇವಲ ತನ್ನ ವೈಯಕ್ತಿಕ ಸ್ವಾರ್ಥ ಸಾಧನೆಗೆ ಉತ್ಸುಕನಾಗಿರುವುದನ್ನು ಕಾಣಬಹುದು. ಅದೇ ರೀತಿಯಲ್ಲಿ ಸಿರಿವಂತ, ಅಧಿಕಾರಕ್ಕೆ ಹತ್ತಿರವಿರುವ ಕುಟುಂಬದಲ್ಲಿ ಜನಿಸಿದ ವ್ಯಕ್ತಿಗಳಲ್ಲಿ ರಾಷ್ಟ್ರದ ಕುರಿತಾದ ಕಾಳಜಿಗಿಂತ ವೈಯಕ್ತಿಕ ಲಾಭದ ಲಾಲಸೆಯೇ ಹೆಚ್ಚಾಗಿರುವುದನ್ನು ಸೂಕ್ಷ್ಮವಾಗಿ ಗಮನಿಸಿದರೆ ಸ್ಪಷ್ಟವಾಗಿ ಕಾಣಬಹುದು. ದಲಿತೋದ್ಧಾರ, ಬಡತನ ನಿವಾರಣೆ, ಹಳ್ಳಿಗಳ ಉದ್ಧಾರದ ಕುರಿತು ಉದ್ದುದ್ದ ಭಾಷಣ ಮಾಡುವ ರಾಜಕಾರಣಿಯ ಜೋಳಿಗೆಯನ್ನು [?] ನೋಡಲು ಹೆಚ್ಚೇನೂ ಕಷ್ಟಪಡಬೇಕಿಲ್ಲ.

ಈ ಬಾರಿಯ ಲೋಕಸಭಾ ಚುನಾವಣೆಯಲ್ಲಿ ರಾಜಕಾರಣಿಗಳು ಪರಸ್ಪರ ದೂಷಿಸಿಕೊಂಡಿದ್ದಷ್ಟೇ ಅಲ್ಲದೇ ಸಂವಿಧಾನಾತ್ಮಕ ಸಂಸ್ಥೆಗಳನ್ನು ತಮ್ಮ ಕೊಳಕು ರಾಜಕೀಯಕ್ಕೆ ಬಳಸಿಕೊಂಡರು. ಚುನಾವಣಾ ಆಯೋಗ, ಸರ್ವೋಚ್ಚ ನ್ಯಾಯಾಲಯ, ಸೇನೆಯ ಸಮನ್ವಯವನ್ನೂ [?] ಚ್ಯುತಿ ತರುವಂತೆ ರಾಜಕಾರಣಿಗಳು ನಡೆದುಕೊಂಡರು. ಚುನಾವಣಾ ಆಯೋಗದ ನಿರ್ದೇಶನಗಳಿಗೆ ಕ್ಯಾರೆ ಎನ್ನಲಿಲ್ಲ, ನ್ಯಾಯಾಲಯದ ತೀರ್ಪನ್ನು ತಮಗೆ ಬೇಕಾದಂತೆ ತಿರುಚಿ, ಹೇಳದೇ ಇರುವುದನ್ನು ಹೇಳಿದಂತೆ ಮಾಡಿ ನ್ಯಾಯಾಲಯ ನಿಂದನೆಯ ಕೆಲಸ ಮಾಡಿದ್ದೂ. ಪ್ರಧಾನ ಮಂತ್ರಿಯ ಸ್ಥಾನದ ಗರಿಮೆಯನ್ನೂ ಲೆಕ್ಕಿಸದೇ ಅವಹೇಳನಗಳ [?] ಪ್ರಯೋಗ ಮಾಡಲಾಯಿತು. ವಿರೋಧ ಪಕ್ಷದಲ್ಲಿರುವ ಮಹಿಳೆಯರ ಕುರಿತು ಅಸಭ್ಯವಾಗಿ ಟೀಕಿಸಲಾಯಿತು.

ತಮ್ಮ ಮಕ್ಕಳು, ಮೊಮ್ಮಕ್ಕಳನ್ನು, ಕುಟುಂಬಿಕರನ್ನು ರಾಜಕೀಯದಲ್ಲಿ ಪ್ರತಿಷ್ಠಾಪಿಸಲು ಹೆಣಗುತ್ತಿರುವ ನಾಯಕರಿಗೆ ದೇಶ ಹಿತದ ಬಗ್ಗೆ ಪರಿವೆ ಇಲ್ಲ. ಭ್ರಷ್ಟ ಮಾರ್ಗದಲ್ಲಿ ಗಳಿಸಿದ ಹಣದಿಂದ ಮತದಾರರನ್ನು ಖರೀದಿಸುವ ಅವರಿಗೆ ನಿಷ್ಠರಾಗಿರುವ ಜನರಿಗೆ ಧಿಕ್ಕಾರವಿರಲಿ. ಸಂಪೂರ್ಣ ರಾಜ್ಯದ/ದೇಶದ ಹಿತ ಅಲಕ್ಷಿಸಿ ತಮ್ಮ ಸ್ವಂತ ಕ್ಷೇತ್ರದಲ್ಲಿ ಒಂದಷ್ಟು ಅಭಿವೃದ್ಧಿ ಮಾಡಿ ಕ್ಷೇತ್ರವನ್ನು ತಮ್ಮ ಕುಟುಂಬದ ಜಾಗೀರಾಗಿಸುವ ಜನಪ್ರತಿನಿಧಿಗಳಿಗೆ ಮತದಾರರು ಬುದ್ಧಿ ಕಲಿಸುವಂತಾಗಬೇಕು.

ಸೇನೆ, ರಾಷ್ಟ್ರದ ಕುರಿತಾಗಿ ಕುಹಕದ ಮಾತನಾಡುವ, ಕಲ್ಲರ [?] ಕೋಟಿ ಹರಿಸಿ ಭಾವನಾತ್ಮಕ ಭಾಷಣ ಮಾಡುವ ಲಕ್ಷಾಂತರ [?] ರಾಜಕಾರಣಿಗಳಿಗೆ ತಕ್ಕ ಪಾಠ ಕಲಿಸಬೇಕಿದೆ. ನಮ್ಮ ಪ್ರಜಾಪ್ರಭುತ್ವಕ್ಕೆ ಗಂಡಾಂತರ ಎದುರಾಗಿದೆ. ಐಷಾರಾಮಿ ಬದುಕು ಕಟ್ಟಿಕೊಂಡಿರುವ ನಮ್ಮ ಜನ ಪ್ರತಿನಿಧಿಗಳಿಗೆ ಸಾಮಾನ್ಯರ ಬದುಕಿನ ಕಷ್ಟಗಳು ಅರ್ಥವಾಗುವುದಿಲ್ಲ, ಚುನಾವಣಾ ಸಮಯದಲ್ಲಿ ಗಿಮಿಕ್ ಮಾಡಿ ಮತದಾರರನ್ನು ಮೂರ್ಖರನ್ನಾಗಿಸುವ ಕಲೆ ಅವರಿಗೆ ಕರಗತವಾಗಿದೆ.

ದೇಶದ ಗಡಿಯಲ್ಲಿ ತಮ್ಮ ಪ್ರಾಣದ ಹಂಗು ತೊರೆದು ಉಗ್ರರೊಂದಿಗೆ ಸೆಣಸುವ, ಪಾಕಿಸ್ತಾನೀಯರ ಕುತಂತ್ರಗಳನ್ನು ಎದುರಿಸುತ್ತಿರುವ ಸೈನಿಕರನ್ನೂ ರಾಜಕಾರಣಿಗಳು ತಮ್ಮ ಕೀಳು ರಾಜಕೀಯಕ್ಕಾಗಿ ಬಳಸಿಕೊಂಡರು. ರಾಜ್ಯದ ಮುಖ್ಯಮಂತ್ರಿಗಳು ಸೈನಿಕರ ಕುರಿತಾಗಿ ನೀಡಿದ ಹೇಳಿಕೆ ರಾಜ್ಯದ ಘನತೆಗೆ ಚ್ಯುತಿ ತರುವಂತಹದ್ದಾಗಿದೆ. ದೇಶದ ಸಾಮಾನ್ಯ ನಾಗರಿಕ ಸೈನಿಕರ ಕುರಿತಾಗಿ ಅತ್ಯಂತ ಗೌರವಾದರಗಳಿಂದ ಕಾಣುತ್ತಾನೆ ಎನ್ನುವುದು ಸೇನೆಯಲ್ಲಿ ಎರಡು ದಶಕಗಳ ಕಾಲ ಸೇವೆ ಸಲ್ಲಿಸಿದ ನನ್ನ ಸ್ವಂತ ಅನುಭವ. ಸೇನೆಯ ತರಬೇತಿಯ ಸಲುವಾಗಿ ಗುಡ್ಡಗಾಡುಗಳಲ್ಲಿ ಅಲೆಯುತ್ತಿದ್ದಾಗ ಸೇನಾ ಸಮವಸ್ತ್ರದಲ್ಲಿ ಕಂಡ ನಮ್ಮನ್ನು ಹಳ್ಳಿಗರು ಉಪಚರಿಸಿ-ಸತ್ಕರಿಸಿದ ನೂರಾರು ಅನುಭವ ಇದೆ. ರೈಲು, ಬಸ್‌ಗಳಲ್ಲಿ ಸೈನಿಕರನ್ನು ಕಂಡೊಡನೆ ಸಹ ಯಾತ್ರಿಗಳು ಆದರ-ಅಭಿಮಾನದಿಂದ ವ್ಯವಹರಿಸುವುದು ಸಾಮಾನ್ಯ ಅನುಭವ. ಹಳ್ಳಿಗಳಲ್ಲಿ ಸೇನೆಯ ವಾಹನ ಹೋಗುತ್ತಿದ್ದರೆ ಪುಟ್ಟ ಪುಟ್ಟ ಮಕ್ಕಳು ಓಡೋಡಿ ಬಂದು ಸೈನಿಕರಿಗೆ ಸೆಲ್ಯೂಟ್ ಹೊಡೆಯುವುದನ್ನು ಕಾಣಬಹುದು.

ರಾಜಕಾರಣವನ್ನು ದಂಧೆ ಮಾಡಿಕೊಂಡು ಲಾಭ ಮಾಡಿಕೊಂಡವರು ತಮ್ಮ ಮುಂದಿನ ಪೀಳಿಗೆಗೂ ಆ ಲಾಭ ದೊರಕಲಿ ಎಂದು ಇನ್ನಿಲ್ಲದಂತೆ ಭಗೀರಥ ಪ್ರಯತ್ನ ಮಾಡುತ್ತಾರೆ. ಬಡ ಮತದಾರನ ತೆರಿಗೆಯಲ್ಲಿ ಮೋಜು ಮಾಡುತ್ತಾ, ಜನವನ್ನು ಶೋಷಣೆ ಮಾಡುವ ಪೋಲಿಗಳಂತೆ ವರ್ತಿಸುವ ಕೆಲವು ರಾಜಕಾರಣಿಗಳಿಗೆ ಅಧಿಕಾರವಿಲ್ಲದೇ ಇರಲು ಸಾಧ್ಯವೇ ಇಲ್ಲ. ಇಂತಹ ಉಡಾಫೆ ಮಂದಿಗೆ ದೇಶಕ್ಕಿಂತ ತಮ್ಮ ಸ್ವಾರ್ಥವೇ ಮುಖ್ಯ. ಜಾತಿ, ಪ್ರಾಂತ, ಧರ್ಮದ ಆಧಾರದಲ್ಲಿ ರಾಜಕಾರಣ ಮಾಡಿಕೊಂಡು ಹಾಯಾಗಿರುವ ಇವರಿಗೆ ಸ್ವಾಭಿಮಾನವಾಗಲೀ ಅಥವಾ ದೇಶಾಭಿಮಾನವಾಗಲೀ ಇಲ್ಲ. ಇಂತಹವರಿಗೆ ಸಾಮಾನ್ಯ ನಾಗರಿಕನಲ್ಲಿರುವಷ್ಟು ದೇಶದ ಕಾಳಜಿ ಕೂಡಾ ಇಲ್ಲ. ಇಂತಹ ಸೋಗಲಾಡಿಗಳಿಗೆ ಬಿಸಿ ಮುಟ್ಟಿಸದಿದ್ದರೆ ದೇಶ ಈ ಪಾಳೇಗಾರರ ಸೊತ್ತಾಗುವ ದಿನ ದೂರವಿಲ್ಲ.

# ಶಿಕ್ಷಕರ ಕೆಲಸ ಅಂಕ ಗಳಿಸುವ ಯಂತ್ರಗಳನ್ನು ತಯಾರು ಮಾಡುವುದಲ್ಲ

• ಶ್ರೀನಿವಾಸಮೂರ್ತಿ. ಎನ್ ಸುಂಡ್ರಹಳ್ಳಿ

ಬದುಕಿನಲ್ಲಿ ಮೋಸ ಮಾಡಿ ಗೆಲ್ಲುವುದಕ್ಕಿಂತ ಪ್ರಾಮಾಣಿಕವಾಗಿ ಸೋಲುವುದನ್ನು ಕಲಿಸಿ. ಸೋತರೂ ಪರವಾಗಿಲ್ಲ, ಬದುಕಿನಲ್ಲಿ ಖುಷಿಯಾಗಿ ಮತ್ತು ಜೀವಿಸುವುದನ್ನು ಕಲಿಸಿ. ಆತನಿಗೆ ಉತ್ತಮ ಪುಸ್ತಕಗಳ ಹುಚ್ಚು ಹಿಡಿಯುವಂತೆ ಮಾಡಿ, ಶಾಲೆಯ ಪುಸ್ತಕಗಳಷ್ಟೇ ನಮ್ಮ ಮಿತಿ ಎಂಬ ಭ್ರಮೆ ಹುಟ್ಟಿಸಬೇಡಿ. ದಯವಿಟ್ಟು ನನ್ನ ಮಗನಿಗೆ ಅಂಕಗಳ ಹುಚ್ಚು ಹಿಡಿಸಬೇಡಿ. ಒಂದು ಉನ್ನತ ಹುದ್ದೆ ಹಿಡಿಯುವುದಕ್ಕಾಗಿ ನೀನು ಓದಲಿಕ್ಕೆ ಬಂದಿದ್ದೀಯ ಎಂಬುದನ್ನು ಹೇಳಿಕೊಡಬೇಡಿ. ನಾನು ಅವನನ್ನು ಒಬ್ಬ ಡಾಕ್ಟರ್, ಎಂಜಿನಿಯರ್, ಉನ್ನತ ಅಧಿಕಾರಿಗಿಂತ ಒಳ್ಳೆಯ ಮನುಷ್ಯನಾಗಿ ಬಾಳುವುದನ್ನು ಕಾಣಬಯಸುತ್ತೇನೆ.... ಎಂದು ಅಬ್ರಾಹಂ ಲಿಂಕನ್ ತನ್ನ ಮಗನನ್ನು ಶಾಲೆಗೆ ಸೇರಿಸುವಾಗ ಅಲ್ಲಿನ ಶಿಕ್ಷಕರಿಗೆ ಪತ್ರದ ಮುಖೇನ ವಿನಂತಿ ಮಾಡಿಕೊಂಡಿದ್ದರಂತೆ. ಈಗ ಈ ಪತ್ರದ ಪ್ರಸ್ತುತತೆ ಏನು? ಎಂಬ ಪ್ರಶ್ನೆ ನಿಮ್ಮ ಮುಂದಿನಲ್ಲಿ ಎದ್ದಿರಲಿಕ್ಕೂ ಸಾಕು.

ಹತ್ತನೇ ತರಗತಿಯ ಪರೀಕ್ಷೆ ಮುಗಿಯಿತು. ಇನ್ನೇನು ಕೆಲವೇ ದಿನಗಳಲ್ಲಿ ಫಲಿತಾಂಶ ಹೊರಬೀಳುತ್ತದೆ. ಪರೀಕ್ಷೆ ಆರಂಭದ ಮೊದಲ ದಿನದಿಂದಿಡಿದು ಕೊನೆಯವರೆಗೂ ಪ್ರತಿ ದಿನವೂ ಒಂದಲ್ಲ ಒಂದು ಕಡೆ ಸಾಮೂಹಿಕ ನಕಲು ಮಾಡಿಸುತ್ತಿರುವ ಕುರಿತು ಸುದ್ದಿಯಾಗುತ್ತಲೇ ಇತ್ತು. ಇದಕ್ಕೆ ಮೂಲ ಕಾರಣ ಶಿಕ್ಷಕರೂ ಸೇರಿದಂತೆ ಪ್ರತಿಯೊಬ್ಬರೂ ಮೌಲ್ಯಾಧಾರಿತ ಶಿಕ್ಷಣದ ಹಿಂದೆ ಬೀಳದೆ, ಅಂಕಗಳ ಹಿಂದೆ ಓಡುತ್ತಿರುವುದು. ನಮ್ಮ ಶಾಲೆಗೆ ಶೇಕಡಾ ನೂರರಷ್ಟು ಫಲಿತಾಂಶ ಬರಬೇಕು, ನಮ್ಮ ಶಾಲೆಯ ವಿದ್ಯಾರ್ಥಿ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕಗಳನ್ನು ಪಡೆದು ರಾಜ್ಯಕ್ಕೆ ಅಥವಾ ಜಿಲ್ಲೆಗೆ ಮೊದಲಿಗನಾಗಿ ಪಾಸಾಗಬೇಕು ಎಂಬ ಹುಸಿ ಪ್ರತಿಷ್ಠೆಗೆ ಬಿದ್ದಿರುವುದು. ಅನುಸರಿಸುವ ಮಾರ್ಗ ಯಾವುದಾದರೂ ಸರಿ; ನಮ್ಮ ಶಾಲೆಗೆ ಶೇ. ನೂರು ಫಲಿತಾಂಶ ಬಂದರೆ ಸಾಕು ಅದೇ ನಮ್ಮ ಶಾಲೆಯ ಹೆಮ್ಮೆ. ಇಡೀ ರಾಜ್ಯದಲ್ಲಿ ನಮ್ಮ ಜಿಲ್ಲೆ ಮೊದಲ ಹತ್ತು ಸ್ಥಾನಗಳಲ್ಲಿ ಕಾಣಿಸಿಕೊಂಡರೆ ಸಾಕು ಅದೇ ನಮ್ಮ ಇಲಾಖೆಯ ಹೆಚ್ಚುಗಾರಿಕೆ ಎಂಬ ಭ್ರಮೆಯಲ್ಲಿ ನಾಡಿನುದ್ದಕ್ಕೂ ಎಲ್ಲಾ ಶಾಲೆಗಳು ಪರೀಕ್ಷೆಗಳನ್ನು ನಡೆಸುತ್ತಿವೆ. ಇನ್ನೂ ಮುಂದೆ ಹೋಗುವ ಬಹುತೇಕ ಖಾಸಗಿ ಶಾಲೆಗಳು ಶೇಕಡಾ ನೂರರ ಫಲಿತಾಂಶದ ದೃಷ್ಟಿಯಿಂದ, ಅನುತ್ತೀರ್ಣರಾಗಿರು ಎಂದೆನಿಸಿದ ವಿದ್ಯಾರ್ಥಿಗಳನ್ನು ಒಂಬತ್ತನೇ ತರಗತಿ ಮುಗಿಯುತ್ತಿದ್ದಂತೆ ಟಿಸಿ ಕೊಟ್ಟು ಕಳುಹಿಸುತ್ತವೆ. ಎಲ್‌ಕೆಜಿಯಿಂದ ಒಂಬತ್ತನೇ ತರಗತಿಯವರೆಗೆ ಲಕ್ಷಗಟ್ಟಲೆ ಶುಲ್ಕ ಪೀಕುವ ಇವರುಗಳಿಗೆ, ಫೇಲಾಗುತ್ತಾನೆ ಎಂಬ ಒಂದೇ ಕಾರಣಕ್ಕೆ ಹತ್ತನೇ ತರಗತಿಗೆ ಆ ಹುಡುಗ ಬೇಕಾಗುವುದಿಲ್ಲ. ಓದುವವರಿಗಷ್ಟೇ ಇವರು ಕಲಿಸುವುದಾದರೆ ಕಲಿಕೆಯಲ್ಲಿ ಹಿಂದುಳಿದವರಿಗೆ ಕಲಿಸುವವರು ಯಾರು? ಅವರು ಅನಿವಾರ್ಯವಾಗಿ ಸರಕಾರಿ ಶಾಲೆಗಳಿಗೆ ದಾಖಲಾಗುತ್ತಾರೆ.

ನಾನು ಪಿಯುಸಿ ಓದುವ ಮಕ್ಕಳಿಗೂ ಪಾಠ ಮಾಡಿದ್ದೇನೆ ಮತ್ತು ಪದವಿ ವಿದ್ಯಾರ್ಥಿಗಳಿಗೂ ಪಾಠ ಮಾಡುತ್ತಿದ್ದೇನೆ. ಮೂರು ವರ್ಷಗಳಿಂದ ಪ್ರಾಂಶುಪಾಲನಾಗಿ ಕಾರ್ಯ ನಿರ್ವಹಿಸುತ್ತಿರುವ ನಾನು ಕೆಲಸ ಬಯಸಿ ಬರುವ ಸಾಕಷ್ಟು ಭಾವಿ ಉಪನ್ಯಾಸಕರುಗಳನ್ನು ಬೋಧಕೇತರ ಸಿಬ್ಬಂದಿಯನ್ನು ಎದುರುಗೊಳ್ಳುತ್ತಿರುತ್ತೇನೆ. ಯಾವುದೇ ಕೌಶಲ್ಯಗಳಿಲ್ಲದೇ, ಪೂರ್ವ ತಯಾರಿಗಳಿಲ್ಲದೇ ರೆಸ್ಯೂಮ್ ಹಿಡಿದು ಮುಂದೆ ಕೂರುತ್ತಾರೆ. ಒಂದು ಡೆಮೋ ಕ್ಲಾಸ್ ಕೊಡಿ ಎಂದರೆ ಪ್ರಿಪೇರ್ ಆಗಿಲ್ಲ ಸರ್, ಎರಡು ದಿನ ಟೈಮ್ ಕೊಡಿ ಎಂದು ಕೇಳುತ್ತಾರೆ. ನಿಮ್ಮ ಗ್ರಂಥಾಲಯದಿಂದ ಪುಸ್ತಕಗಳನ್ನು ಎರವಲು ಪಡೆಯಬಹುದಾ ಎಂದು ಯಾವುದೇ ಅಂಜಿಕೆಯಿಲ್ಲದೇ ಕೇಳುತ್ತಾರೆ. ಎರಡು ದಿನಗಳ ನಂತರ ಬಂದರೂ ಕೂಡ ಹತ್ತರಿಂದ ಹನ್ನೆರಡು ನಿಮಿಷಗಳಿಗೆ ತರಗತಿ ಮುಗಿಸಿ ಮುಖ ನೋಡುತ್ತಿರುತ್ತಾರೆ. ಉಪನ್ಯಾಸಕರಾಗಬಯಸುವವರು ಕನಿಷ್ಠ ಅರವತ್ತು ನಿಮಿಷ ಕೂಡ ಸ್ಥಿರವಾಗಿ ಪಾಠ ಮಾಡುವಷ್ಟು ಕೌಶಲ್ಯವಾಗಲೀ, ಜ್ಞಾನವಾಗಲೀ, ವೇದಿಕೆ ಸಾಮರ್ಥ್ಯವಾಗಲೀ ಪಡೆದಿರುವುದಿಲ್ಲ. ಹೋಗಲಿ ಅವಕಾಶ ಕೊಟ್ಟು ನೋಡೋಣ ಕಲಿಯಲಿ ಎಂದರೆ ವಾರಕ್ಕೆ 16 ರಿಂದ 20 ಗಂಟೆ ಪಾಠ ಮಾಡಲು ಆಗುವುದಿಲ್ಲ 8 ಗಂಟೆ ಮಾಡುತ್ತೇನೆ ಎನ್ನುತ್ತಾರೆ. ಹಾಗಾದರೆ ಪದವಿ ಮತ್ತು ಸ್ನಾತಕೋತ್ತರ ಪದವಿ ಓದುವಾಗ ಯಾವ ಕೌಶಲ್ಯಗಳನ್ನು ಮೈಗೂಡಿಸಿಕೊಂಡರು? ಎಂತಹ ಜ್ಞಾನವನ್ನು ಪಡೆದುಕೊಂಡರು? ಎಂಬ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿಯುತ್ತವೆ. ಇನ್ನು ಕಚೇರಿ ಕೆಲಸಕ್ಕೆಂದು ಬರುವವರು ಕಂಪ್ಯೂಟರ್ ಜ್ಞಾನ ಪಡೆದಿರುವುದಿಲ್ಲ, ಕನ್ನಡ, ಇಂಗ್ಲಿಷ್ ಟೈಪ್ ಕೂಡ ಮಾಡಲು ಬರುವುದಿಲ್ಲ. ಶಾಲಾ ಹಂತದಿಂದಲೇ ಕಲಿಯಬೇಕಾದ ಕೌಶಲ್ಯಗಳನ್ನು ಕಲಿಸುತ್ತಿಲ್ಲ ಮತ್ತು ಕಲಿಯುತ್ತಲೂ ಇಲ್ಲ. ಅವರು ಕಲಿತದ್ದು ಮತ್ತು ಕಲಿಸಿದ್ದು ಎರಡೂ ಕೂಡ ಕೇವಲ ಪರೀಕ್ಷೆಗಾಗಿಯೇ ಮಾತ್ರ.

ಕಲಾ ವಿಭಾಗದಲ್ಲಿ ಓದುವವನಿಗೆ ಇತಿಹಾಸ ಇಷ್ಟವಿಲ್ಲ, ಆದರೆ ಅರ್ಥಶಾಸ್ತ್ರ ತುಂಬಾ ಇಷ್ಟವೆಂದರೂ ಆತನಿಗೆ ಇತಿಹಾಸದ ಜಾಗದಲ್ಲಿ ಅರ್ಥಶಾಸ್ತ್ರ ಆರಿಸಿಕೊಳ್ಳುವ ಅವಕಾಶವಿಲ್ಲ, ಹಾಗೆಯೇ ವಿಜ್ಞಾನ ವಿಭಾಗದಲ್ಲಿ ಓದುವವನಿಗೆ ಗಣಿತ ಕಷ್ಟ ಅರ್ಥಶಾಸ್ತ್ರ ಸುಲಭ, ನಾನು ಗಣಿತ ಬಿಟ್ಟು ಅರ್ಥಶಾಸ್ತ್ರ ಕಲಿಯುತ್ತೇನೆ ಎಂದರೆ ಅದಕ್ಕೆ ನಮ್ಮ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲ.

ಇಷ್ಟದ ವಿಷಯಗಳನ್ನು ಆರಿಸಿಕೊಂಡು ಕಲಿಯುವಂತಹ ವ್ಯವಸ್ಥೆಯನ್ನು ನಮ್ಮ ವಿಶ್ವವಿದ್ಯಾಲಯಗಳು ಮತ್ತು ಶಿಕ್ಷಣ ತಜ್ಞರು ರೂಪಿಸಬೇಕಿದೆ. ಓದಿನ ಜೊತೆ ಜೊತೆಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತುಗೊಳಿಸುವ ಹಾಗೂ ಇಷ್ಟದ ಕ್ಷೇತ್ರದಲ್ಲಿ ಮುಂದುವರೆಯಲು ಬೇಕಾಗುವ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕತೆ ಮತ್ತು ಪೇಶಾವೃತ್ತಿ ಎರಡನ್ನೂ ಅಳವಡಿಸಿಕೊಳ್ಳಬೇಕಿದೆ. ಹೀಗಾದಲ್ಲಿ ಮಾತ್ರ ಶಿಕ್ಷಣ ಕ್ಷೇತ್ರದ ಸಂಪದ್ಭರಿತ ಸಾಧ್ಯ. ಇಲ್ಲದೇ ಹೋದರೆ ಕೇವಲ ಅಂಕ ಗಳಿಸುವ ಯಂತ್ರಗಳನ್ನಷ್ಟೇ ತಯಾರು ಮಾಡಿದಂತಾಗುತ್ತದೆ.

ದಿನ ಭವಿಷ್ಯ

**ಮೇಷ**
ವೃತ್ತಿಯಲ್ಲಿ ಮತ್ತು ಮನೆಯಲ್ಲಿ ಕೆಲವು ಸವಾಲುಗಳು. ಸಂಘರ್ಷಕ್ಕೆ ಅವಕಾಶ ನೀಡಬೇಡಿ. ತಾಳ್ಮೆಯಿಂದ ವ್ಯವಹರಿಸಬೇಕು. ಆರೋಗ್ಯ ಸಮಸ್ಯೆ.

**ವೃಷಭ**
ಇತರರ ಸ್ವಭಾವವನ್ನು ಅರಿತು ಅವರೊಂದಿಗೆ ಸ್ನೇಹ ಬೆಳೆಸಿ. ಹಣಕಾಸು ವಿಷಯದಲ್ಲಿ ರಿಸ್ಕ್ ತೆಗೆದುಕೊಳ್ಳಲು ಹೋಗದಿರಿ.

**ಮಿಥುನ**
ಆರ್ಥಿಕವಾಗಿ ಉತ್ತಮ ದಿನ. ಖರ್ಚು ಕಡಿಮೆ, ಆದಾಯ ಹೆಚ್ಚು. ಮನೆಯಲ್ಲಿ ಸಂತೋಷದ ಸಮಾರಂಭಕ್ಕೆ ಅವಕಾಶ ಒದಗಬಹುದು. ಬಂಧು ಮಿತ್ರರ ಭೇಟಿ.

**ಕಟಕ**
ಉತ್ಸಾಹದ ದಿನ. ಆಪ್ತರೊಂದಿಗೆ ಆತ್ಮೀಯವಾಗಿ ಕಾಲ ಕಳೆಯುವ ಅವಕಾಶ ಒದಗುವುದು. ಮೋಜು ಅತಿರೇಕಕ್ಕೆ ಹೋಗದಂತೆ ನೋಡಿಕೊಳ್ಳಿ.

**ಸಿಂಹ**
ಕೆಲಸದಲ್ಲಿ ಶುಭ ಬೆಳವಣಿಗೆ. ಹೊಸ ಅವಕಾಶ ಸಿಗಲಿದೆ. ಮಿತ್ರರೊಂದಿಗೆ ವಾಗ್ವಾದ ನಡೆದೀತು. ಸಹನೆಯಿಂದ ವರ್ತಿಸುವುದು ಹಿತಕರ.

**ಕನ್ಯಾ**
ಅನಿರೀಕ್ಷಿತ ಕಾರ್ಯಗಳು ನಿಮ್ಮೆದುರಾಗಬಹುದು. ಕೆಲವರಿಗೆ ಇದು ಅಚ್ಚರಿ ಮೂಡಿಸಬಹುದು. ಹಳೆಯ ತಪ್ಪು ತಿದ್ದಿಕೊಳ್ಳುವ ಅವಕಾಶ ದೊರಕಲಿದೆ, ಬಳಸಿಕೊಳ್ಳಿ.

**ತುಲಾ**
ವೃತ್ತಿ ಕ್ಷೇತ್ರದಲ್ಲಿ ಇತರರ ಮೇಲೆ ಮೇಲುಗೈ ಸಾಧಿಸುವಿರಿ. ನಿಮ್ಮ ನಿರ್ವಹಣೆ ಉತ್ತಮ ಫಲ ನೀಡಲಿದೆ. ಕೌಟುಂಬಿಕವಾಗಿಯೂ ಶಾಂತಿ, ಸಮಾಧಾನ.

**ವೃಶ್ಚಿಕ**
ಖಾಸಗಿ ಬದುಕಿನಲ್ಲಿ ಸಮಸ್ಯೆ ತೋರಿ ಬಂದೀತು. ಆದರೆ ನಿಮ್ಮ ಸಂವಹನ ಸಾಮರ್ಥ್ಯದಿಂದ ಅದನ್ನು ನಿಭಾಯಿಸುವಿರಿ. ಆರ್ಥಿಕ ಒತ್ತಡ ಹೆಚ್ಚಲಿದೆ.

**ಧನು**
ನಿಮ್ಮ ಸಾಮರ್ಥ್ಯದ ಮೇಲೆ ನಿಮಗೇ ಅಪನಂಬಿಕೆ. ಆದರೆ ಆತ್ಮವಿಶ್ವಾಸದಿಂದ ಮುನ್ನಡೆದರೆ ನಿಮಗೆ ಯಶಸ್ಸು ಖಂಡಿತ. ಆರೋಗ್ಯ ಸುಧಾರಣೆ.

**ಮಕರ**
ಒತ್ತಡಗಳಿದ್ದರೂ ನಿಮ್ಮ ಕಾರ್ಯವನ್ನು ಸಮರ್ಥವಾಗಿ ನಿಭಾಯಿಸುವಿರಿ. ಅದು ಮೆಚ್ಚುಗೆ ಗಳಿಸುತ್ತದೆ. ಕೌಟುಂಬಿಕ ಸಂತೋಷ, ಸಾಮರಸ್ಯ.

**ಕುಂಭ**
ನಿಮ್ಮ ವೈವಾಹಿಕ ಜೀವನಕ್ಕೆ ಸಂಬಂಧಿಸಿ ಪ್ರಮುಖ ನಿರ್ಧಾರ ತಾಳಬೇಕಾಗುತ್ತದೆ. ಆತುರ ತೋರದಿರಿ. ಹಣಕಾಸು ಮುಗ್ಗಟ್ಟು ಕಾಡುತ್ತದೆ.

**ಮೀನ**
ಪ್ರೀತಿಯ ಆಕರ್ಷಣೆಗೆ ಒಳಗಾಗುವ ಸಾಧ್ಯತೆಯಿದೆ. ವೃತ್ತಿಯಲ್ಲಿ ಕಿರುಕುಳ ಅನುಭವಿಸುವಿರಿ. ಕೌಟುಂಬಿಕ ಸಹಕಾರ, ಆಸಮಾಧಾನ.

ರಾಹುಕಾಲ: 3.00–4.30, ಯಮಗಂಡಕಾಲ: 9.00–10.30, ಗುಳಿಕಕಾಲ: 12.00–1.30 | ಅದೃಷ್ಟ ಸಂಖ್ಯೆ: 1,7,5,2

hosavishesha@gmail.com

# ಪ್ರಜಾಪ್ರಭುತ್ವದ ಭವಿಷ್ಯ ಮತದಾರರ ಕೈಯಲ್ಲಿದೆ

**ಶಿವಮೊಗ್ಗ :** ಪ್ರಜಾಪ್ರಭುತ್ವದ ಭವಿಷ್ಯ ಮತದಾರರ ಕೈಯಲ್ಲಿರುವುದರಿಂದ ಮತದಾನ ಪ್ರಕ್ರಿಯೆಯಿಂದ ದೂರ ಉಳಿಯದೆ ಹಾಗೂ ಜವಾಬ್ದಾರಿಯಿಂದ ನುಣುಚಿಕೊಳ್ಳದೆ ಎಲ್ಲರೂ ಮತದಾನ ಮಾಡುವಂತೆ ಜಿಲ್ಲಾಧಿಕಾರಿ ಕೆ.ಎ. ದಯಾನಂದ ಮನವಿ ಮಾಡಿದರು.

ಲೋಕಸಭೆ ಚುನಾವಣೆ ಅಂಗವಾಗಿ ಹಮ್ಮಿಕೊಂಡಿದ್ದ ಮೊಬೈಲ್ ಟಾರ್ಚ್ ಲೈಟ್ ಮಾರ್ಚ್ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ಯಾರೂ ಕೂಡ ಚುನಾವಣೆ ಹಬ್ಬದಿಂದ ತಪ್ಪಿಸಿಕೊಳ್ಳಬಾರದು ಎಂದು ಹೇಳಿದರು.

ಕಳೆದ ಬಾರಿಗಿಂತ ಅತಿ ಹೆಚ್ಚು ಮತದಾನ ಈ ಚುನಾವಣೆಯಲ್ಲಿ ಆಗಬೇಕು. ಶಿವಮೊಗ್ಗವನ್ನು ನಂಬರ್ ಒನ್‌ಸ್ಥಾನಕ್ಕೆ ತರುವಲ್ಲಿ ಎಲ್ಲರೂ ಶ್ರಮಿಸಬೇಕು. ಇದಕ್ಕೆ ಎಲ್ಲಾ ಮತದಾರರು ಸಹಕರಿಸುವ ಮುಖಾಂತರ ಉತ್ತಮ ಪ್ರಜಾ ಪ್ರಭುತ್ವವನ್ನು ನಿರ್ಮಾಣ ಮಾಡಬೇಕಿದೆ. ಮತದಾನ ಮಾಡುವುದರ ಜತೆಗೆ ಬೇರೆಯವರು ಮತದಾನ ಮಾಡಲು ಪ್ರೇರೇಪಿಸಬೇಕು ಎಂದರು. ಮೊಬೈಲ್ ಟಾರ್ಚ್ ಲೈಟ್ ಮಾರ್ಚ್‌ನಲ್ಲಿ ಸ್ವೀಪ್ ದಯಾನಂದ್, ಬಿಇಎಂ ಕಚೇರಿ ಜಿಲ್ಲಾ ಅಧಿಕಾರಿ ಕುಮಾರ್, ಸಮಾಜಕಲ್ಯಾಣ ಇಲಾಖೆಯ ಸತೀಶ್, ಕಿರಣ್‌ಕುಮಾರ್, ಶ್ರೀನಿವಾಸ್ ಹಾಗೂ ವಿವಿಧ ಸಂಘ ಸಂಸ್ಥೆಗಳ ಮುಖ್ಯಸ್ಥರು, ಪದಾಧಿಕಾರಿಗಳು, 2 ಸಾವಿರಕ್ಕೂ ಅಧಿಕ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

ಸೈನ್ಸ್ ಮೈದಾನದಿಂದ ಜೈಲ್‌ವೃತ್ತ, ಲಕ್ಷ್ಮೀ ಟಾಕೀಸ್‌ವರೆಗೆ ಮಾರ್ಚ್ ನಡೆಸಲಾಯಿತು.

## ಅತಿಸೂಕ್ಷ್ಮ ಮತಗಟ್ಟೆಯಲ್ಲಿ ಮೈಕ್ರೋ ಅಬ್ಸರ್ವರ್ ನೇಮಕ

# ಅಧಿಕಾರಿಗಳಿಂದ ಅಂತಿಮ ಸುತ್ತಿನ ಪರಿಶೀಲನೆ

**ಸಾಗರ:** ಮಂಗಳವಾರ ನಡೆಯುವ ಲೋಕಸಭಾ ಚುನಾವಣೆಗೆ ತಾಲೂಕಿನಲ್ಲಿ ಬಿಗಿ ಭದ್ರತೆಯನ್ನು ಕೈಗೊಳ್ಳಲಾಗಿದ್ದು ಶಾಂತಿಯುತ ಮತದಾನಕ್ಕಾಗಿ ಸಕಲ ಸಿದ್ದತೆಗಳನ್ನು ಮಾಡಿಕೊಳ್ಳಲಾಗಿದೆ. ಸೋಮವಾರ ಚುನಾವಣಾಧಿಕಾರಿ ಹಾಗೂ ಉಪ ವಿಭಾಗಾಧಿಕಾರಿ ದರ್ಶನ್ ಪಿ.ವಿ. ಅಂತಿಮ ಸುತ್ತಿನ ಪರಿಶೀಲನೆ ನಡೆಸಿದರು.

ತಾಲ್ಲೂಕಿನಲ್ಲಿ ಒಟ್ಟು 1,99,502 ಮತದಾರರು ಇದ್ದು 98,927 ಪುರುಷ ಮತ್ತು 1,00,574 ಮಹಿಳೆ ಹಾಗೂ ಇತರೆ ಓರ್ವ ಮತದಾರರು ಇದ್ದಾರೆ. ಕ್ಷೇತ್ರ ವ್ಯಾಪ್ತಿಯಲ್ಲಿ ಪುರುಷರಿಗಿಂತ ಮಹಿಳಾ ಮತದಾರರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಈ ಬಾರಿ ಲೋಕಸಭಾ ಚುನಾವಣೆಗೆ 4300ಕ್ಕೂ ಅಧಿಕ ಯುವ ಮತದಾರರು ಸೇರ್ಪಡೆಯಾಗಿದ್ದು, ಅವರು ಮೊದಲ ಬಾರಿಗೆ ತಮ್ಮ ಹಕ್ಕನ್ನು ಚಲಾಯಿಸಲಿದ್ದಾರೆ.

ತಾಲೂಕಿನಲ್ಲಿ 264 ಬೂತ್‌ಗಳನ್ನು ಮಾಡಲಾಗಿದ್ದು ಇವುಗಳ ಪೈಕಿ ಸಾಗರ ನಗರದ ಬೆಳಲಮಕ್ಕಿ ಶಾಸಕರ ಮಾದರಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮತ್ತು ರಾಮನಗರದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯನ್ನು ಸಖಿ ಬೂತ್ ಆಗಿ ಮಾಡಲಾಗಿದೆ. ಉಳಿದ ಮತಗಟ್ಟೆ 239ನ್ನು ಬುಡಕಟ್ಟು ಮತಗಟ್ಟೆಯಾಗಿ ರೂಪಿಸಲಾಗಿದೆ.

ಮತಗಟ್ಟೆ ಕಾರ್ಯಕ್ಕಾಗಿ ಒಟ್ಟು 1,152 ಮತಗಟ್ಟೆ ಅಧಿಕಾರಿಗಳು, ಸಿಬ್ಬಂದಿಗಳನ್ನು ನಿಯೋಜಿಸಲಾಗಿದೆ. ಇದರ ಜೊತೆಗೆ 20 ಅತಿಸೂಕ್ಷ್ಮ ಮತಗಟ್ಟೆಯಲ್ಲಿ ಮೈಕ್ರೋ ಅಬ್ಸರ್ವರ್ ನೇಮಕ ಮಾಡಲಾಗಿದ್ದು, 23 ಸೂಕ್ಷ್ಮ ಮತಗಟ್ಟೆಯಲ್ಲಿ ಸಿಸಿ ಕ್ಯಾಮರಾ ಅಳವಡಿಸಲಾಗಿದೆ.

ಸೋಮವಾರ ತಮಗೆ ಸೂಚಿಸಿದ ಮತಗಟ್ಟೆಗಳಿಗೆ ಇವಿಎಂ ಯಂತ್ರ ಹೊತ್ತು ಮತಗಟ್ಟೆ ಅಧಿಕಾರಿಗಳು ಸಿಬ್ಬಂದಿಗಳು ತೆರಳಿದರು. ಇವರಿಗೆ 35 ಬಸ್ ಹಾಗೂ 36 ಸಣ್ಣ ವಾಹನಗಳನ್ನು ನಿಯೋಜಿಸಲಾಗಿದೆ.

ರಕ್ಷಣಾ ದೃಷ್ಟಿಯಿಂದ ಎಎಸ್‌ಪಿ ಯತೀಶ್ ಎನ್. ನೇತೃತ್ವದಲ್ಲಿ ಅಗತ್ಯ ಕ್ರಮ ಕೈಗೊಳ್ಳಲಾಗಿದ್ದು 4 ಸರ್ಕಲ್ ಇನ್ಸ್‌ಪೆಕ್ಟರ್, ಸಬ್ ಇನ್ಸ್‌ಪೆಕ್ಟರ್ 11, ಎಎಸ್‌ಐ 17, ದಫೇದಾರ್ 54 ಮತ್ತು 118 ಪೊಲೀಸ್ ಪೇದೆಗಳ ಜೊತೆಗೆ 187 ಹೋಂಗಾರ್ಡ್ ನೇಮಕ ಮಾಡಲಾಗಿದೆ. ಇದರ ಜೊತೆಗೆ 2 ಕೆಎಸ್‌ಆರ್‌ಪಿ ತುಕಡಿ, 1 ಕೆಎಸ್‌ಆರ್‌ಪಿ ವಿಶೇಷ ತುಕಡಿ, 4 ಡಿಆರ್ ಜೊತೆಗೆ 23 ಮೊಬೈಲ್ ಸೆಕ್ಟರ್‌ಗಳನ್ನು ನಿಯೋಜಿಸಲಾಗಿದೆ.

---

ಮಾನ್ಯ ಅಪರ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ, ದೊಡ್ಡಬಳ್ಳಾಪುರ

ಓ.ಎಸ್.ನಂ. 475/2018

[illegible]

By Order of the Court Sheristedar 44th ACMM Court Bangalore City

[illegible]

---

**BEFORE THE MOTOR ACCIDENT CLAIMS TRIBUNAL AT BENGALURU**

**MVC.No.656/2019**

**BETWEEN : K.BALARAJU.** ...Petitioner

**AND: MAHAMOOD KHAN & Another** ...Respondent

**NOTICE TO RESPONDENT NO.1**

**MAHAMOOD KHAN,** S/o. Alim Khan, R/at #35, Vijaya Bank Colony, 5th Cross, Chikkabasavapura, Bangalore-560036 (RC Owner of Tipper Lorry Bearing No.KA-53-C-1856)

**WHEREAS,** the above named petitioner have filed the claim petition against you as one of the Respondent for accident date 08.12.2018 at about 2.40 p.m. place of occurrence near Bangalore Kolar NH-75, Service Road, near Budigere Cross under pass, Bangalore, for award of compensation of **Rs.25,00,000/-**, against the Respondent No.1 is RC Owner of Tipper Lorry bearing No.KA-53-C-1856, hereby summoned in the court to appear in person or by a pleader **on 29.05.2019 At 11.00 am** to answer the claim petition on the day fixed for your appearance.

Take notice that, in default of your appearance on the day before mentioned the suit will be heard and determined in your absence.

Given Under my hand & seal of the court on this **16.04.2019** at Bangaluru.

**BY ORDER OF THE COURT MOTOR CLAIMS TRIBUNAL Assistant Registrar Court of Small Causes, Bangalore**

**CHAMPA C Advocate**

# 5, UAS Layout, 1st Main, Opp. 4th Cross Sanjayanagar, Bangalore-560094. Mobile:9886334378, 9739743254

---



---

**ನೈರುತ್ಯ ರೈಲ್ವೆ**

ಇ-ಪ್ರೊಕ್ಯೂರ್‌ಮೆಂಟ್ (ಲಾಗ್‌ಇನ್‌ವೊಸ್) ಟೆಂಡರ್ ಪ್ರಕಟಣೆ ಸಂ. 01 ವರ್ಷದಿಂದ 2019

ದಿನಾಂಕ : 04-04-2019

ಮೇಲ್ಕಂಡ ಟೆಂಡರ್ ಪ್ರಕಟಣೆಯ ಕ್ರ.ಸಂ. 7 ಅನ್ನು ರದ್ದುಪಡಿಸಿದೆ ಎಂದು ಓದಿಕೊಳ್ಳಿ.

ವಿಭಾಗೀಯ ರೈಲ್ವೆ ವ್ಯವಸ್ಥಾಪಕರು, (ಸಂಕೇತ ಮತ್ತು ದೂರಸಂಪರ್ಕ)

ನೈರುತ್ಯ ರೈಲ್ವೆ, ಹುಬ್ಬಳ್ಳಿ

[illegible]

---

## CHANGE OF NAME

I, **Manasa N** W/o Ramamurthy K.L. aged about 29 years, & **Ramamurthy K.L.** aged about 36 years, R/at No.109, Kembaliganahalli Village & Post, Hosakote Taluk, Bengaluru Rural, Bengaluru - 562114. We are declare our daughter's name changed **AVIKSHA.R** to **VEENA. R.** Sworn before advocate and notary **H.G.Venkaramu** B.Com., LL.B, Bengaluru Vide affidavit dated:**22.04.2019.**

---



---

## CHANGE OF NAME

I, **RANJNA BISEN,** W/o PRAVIN KUMAR THAKRE, R/o A 903, Sumadhura Silver Ripples, Borewell Road, Nallurahalli, Whitefield, Bangalore-66, do hereby declare that I have changed my name from **RANJNA BISEN** to **RANJNA THAKRE,** vide affidavit dated 22-04-2019, sworn before Advocate and Notary **G. HEMALATHA** at Bangalore.

## CHANGE OF NAME

I, ASHRAFUL ALOM, S/o. Rafique Uddin Borbhuyan, residing at 134, 6th Main, 2nd Phase, Anugraha Layout, Bilekahalli, Bengaluru - 560 076, have changed my name from **ASHRAFUL ALOM** to **ASHRAF BORBHUYAN.** Vide affidavit dated 22-4-2019 sworn before Notary P. Anuradha at Bangalore.

## CHANGE OF NAME

I, Umadevi Muppala, W/o Bhuvaneswara Raju, R/at #10A/58, 1st Cross, Hebbal Binny Mill Road, Ganganagar, Bengaluru-32, Karnataka State. I have changed my daughter (Minor) name from **HARIPRIYA MUPPLA** to **HARIPRIYA MUPPALA,** Vide affidavit dated 15.04.2019, before Notary K.Ramegowda, Bangalore.

## CHANGE OF NAME

I, Umadevi Muppala, W/o Bhuvaneswara Raju, R/at #10A/58, 1st Cross, Hebbal Binny Mill Road, Ganganagar, Bengaluru-32, Karnataka State. I have changed my son(Minor) name from **VAMSIDHAR MUPPLA** to **VAMSIDHAR MUPPALA,** Vide affidavit dated 15.04.2019, before Notary K.Ramegowda, Bangalore.

## CHANGE OF NAME

I, Umadevi Muppala, W/o Bhuvaneswara Raju Muppala, R/at #10A/58, 1st Cross, Hebbal Binny Mill Road, Ganganagar, Bengaluru-32, Karnataka State. I have changed my name from **UMADEVI MUPPLA** to **UMADEVI MUPPALA,** Vide affidavit dated 15.04.2019, before Notary K.Ramegowda, Bangalore.

## CHANGE OF NAME

I, Sri.G.Thilak, S/o H.N.Gopal Krishna, R/at Flat No.404, 3rd Floor, Siri Indus Apartment No.25/2A, Gundu Muneshwara Temple Road, Subramanyapura Main Road, Uttarahalli, Bangalore-61. I state that the **G.THILAK** and **H.G.TILAK KUMAR** are one and the same belongs to me only and nobody else. Vide affidavit dated: 10.04.2019, before Notary T.C.Thimmaraja, Bangalore.

## CHANGE OF NAME

I, Muppala Bhuvaneshwara Raju, S/o M.Krishnam Raju, R/at #10A/58, 1st Cross, Hebbal Binny Mill Road, Ganganagar, Bengaluru-32, Karnataka State. I have changed my name from **MUPPLA BHUVANESHWARA RAJU** to **MUPPALA BHUVANESHWARA RAJU,** Vide affidavit dated 15.04.2019, before Notary K.Ramegowda, Bangalore.

---

ಮಾನ್ಯ 44ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಗಳ ನ್ಯಾಯಾಲಯ, ಬೆಂಗಳೂರು

ಸಿ.ಮಿಸ್.ನಂ.1262/2019

[illegible]

By Order of the Court Sheristedar 44th ACMM Court Bangalore City

[illegible]

---

**BEFORE THE XXIst ACMM AT BANGALORE CITY.**

**IN THE MATTER OF:**

1. **Nahid** S/o Late Mohammed Nasir, aged about 37 years.
2. **Mohammed Zuber** S/o Late Mohammed Nasir, aged about 30 years. 3. **Habibullah** S/o of Late Mohammed Nasir, aged about 26 years. 4. **Mohammed Haris** S/o of Late Mohammed Nasir, aged about 20 years.
5. **Nasima** W/o of Late Mohammed Nasir aged about 56years.

all residing at #6, 3rd Cross, Gangondanahalli, Nayandanahalli Bangalore-560039. **Petitioners**

**And**

1. **THE COMMISSIONER,** Bruhat Bangalore Mahanagara Palike, Birth and Death Department, behind Upparpet Police Station, Majestic, Bangalore.
2. **ASSISTANT SURGEON CUM SUB-REGISTAR,** Birth and Death Registration Centre Snb Health office, Ashoknagar Shantinagar Range, Bangalore Mahanagara Palike (now BBMP) Bangalore-560025.
3. **CHIEF REGISTRAR OF BIRTHS AND DEATHS AND ADDITIONAL DIRECTOR,** Directorate of Economics and Statistics, 7th Floor, Vishweshwarayya Main Tower, Dr B R. Ambedkar Veedhi, Bangalore - 560001.
4. **THE COMMISSIONER,** BBMP, Corporation Circle, Hudson Circle, Bangalore - 560002. **Respondent**

**NOTICE**

Whereas, the Petitioners intend to file the above petition seeking direction to the respondants from the Hon'ble Court as mentioned above for issuance of Death Certificate of their Late father **Mohammed Nasir** S/o Haroon **dated 02.07.2003** at the residence of the Petitioners. If any person/s interested in this matter may appear before the above mentioned Hon'ble Court either personally or through pleader duly instructed with objections if any **on. 25.04.2019** at 3.00 PM, failing which the above case will be heard and decided ex-parte.

Advocate for petitioners:
**Sadanand G. Shastri,**
No.12/5-1, 8th Main, CK Street, P.G. Halli, Bangalore-560003.

---

**BEFORE THE MOTOR ACCIDENT CLAIMS TRIBUNAL AT BENGALURU**

**MVC.No.656/2019 (SCCH-8)**

**BETWEEN : K.BALARAJU.** ...Petitioner

**AND: MAHAMOOD KHAN & Another** ...Respondent

**NOTICE TO RESPONDENT NO.1**

**MAHAMOOD KHAN,** S/o. Alim Khan, R/at #35, Vijaya Bank Colony, 5th Cross, Chikkabasavapura, Bangalore-560036 (RC Owner of Tipper Lorry Bearing No.KA-53-C-1856).

**WHEREAS,** the above named petitioner have filed the claim petition against you as one of the Respondent for accident date 08.12.2018 at about 2.40 p.m. place of occurrence near Bangalore Kolar NH-75, Service Road, near Budigere Cross under pass, Bangalore, for award of compensation of **Rs.25,00,000/-**, against the Respondent No.1 is RC Owner of Tipper Lorry bearing No.KA-53-C-1856, hereby summoned in the court to appear in person or by a pleader **on 29.05.2019 At 11.00 am** to answer the claim petition on the day fixed for your appearance.

Take notice that, in default of your appearance on the day before mentioned the suit will be heard and determined in your absence.

Given Under my hand & seal of the court on this **16.04.2019** at Bangaluru.

**BY ORDER OF THE COURT Assistant Registrar Court of Small Causes, Bangalore**

**CHAMPA C Advocate**

# 5, UAS Layout, 1st Main, Opp. 4th Cross Sanjayanagar, Bangalore-560094 Mobile:9886334378, 9739743254

---

**IN THE COURT OF THE I ADDL SENIOR CIVIL JUDGE, BENGALURU RURAL DISTRICT BENGALURU**

**O.S. No. 667/2017**

**Between:** Smt. N Prema, D/o Narayanappa ..**Plaintiff**

**And:** Smt Sharadamma & others ..**Defendants**

**NOTICE TO DEFENDANT No 8, 10, 11, 12, 13**

**8. Smt. SUJATHA,** aged about 43 years, W/o Sri M. Rajanna, R/of Konappana Agrahara, Electronic City Post, Bengaluru - 560 100.

**10. Legal Heir of Puttappa Reddy,** Sri RAJASHEKAR, aged about 57 years S/o. N. Puttappa Reddy @ Puttappa R/of Dodda Thogur Village, Begur Hobli, Bengaluru South Taluk.

**11. Sri Veera Bhadrappa,** aged about 57 years S/o. Huchappa R/of Vabsandra Village, Jigani Hobli, Anekal Taluk.

**13. Sri T. BHARATH RAJ,** aged about 70 years, S/o Tirumurthy, R/at No.14, Appayanna Street, Dodda Mavalli, Bengaluru- 04.

Whereas the Plaintiff has filed the above Partition Suit against you all with respect to property in Sy No 35/1 of Konappana Agrahara Village, Begur Hobli, Bangalore South Taluk.

You all are hereby directed to appear before the Hon'ble court either in person or through the pleader on the **14.06.2019** date of hearing at 11 AM to answer the claim of the Appellant, failing which the matter will be heard ex-parte.

**SCHEDULE**

**SCHEDULE A**

Land bearing Sy No.35/1 measuring 01 Acre 14 guntas situated at Konnappana Agrahara Village, Begur Hobli, Bengaluru South Taluk and bounded on the: East by: Land belongs to Balappa, West by: Hosur Road, North by: Land belongs to Srinivasa Reddy, South by: Land belongs to Hanna Gurkappa

**SCHEDULE B**

**Item No 1:** The site No 2, carved out in Sy. No.35/1, Konappana Agrahara Village, Begur Hobli, Bangalore South Taluk, Measuring East to west 40 feet and North to South 30 feet is bounded on: East by: Site No 3, West by: Site No 1, North by: Site No 7, South by: Village Road.

**Item No 2:** The site No 12 and 19, carved out in Sy. No.35/1, Konappana Agrahara Village, Begur Hobli, Bangalore South Taluk, Measuring East to west 40 feet and North to South 60 feet is bounded on: East by: Road West by: Site No 20 and 11, North by: Site No 22, South by: Road.

**Item No 3:** The site No 16 and 25, carved out in Sy. No.35/1, Konappana Agrahara Village, Begur Hobli, Bangalore South Taluk, Measuring East to west 43 feet and North to South 62 feet is bounded on: East by: Road, West by: Road, North by: Private Property, South by: Site No 15.

**Item No 4:** The site No 6, Carved out in Sy.No.35/1, Konappana Agrahara Village, Begur Hobli, Bangalore South Taluk, Measuring East to west 40 feet and North to South 30 feet is bounded on: East by: Site No 5, West by: Site No.7, North by: Road, South by: Site No.3

**Item No.5:** The site No 21, carved out in Sy.No.35/1, Konappana Agrahara Village, Begur Hobli, Bangalore South Taluk, Measuring East to west 40 feet and North to South 44 + 47/2 feet is bounded on:

East by: Site No 22, West by: Road, North by: Private Property, South by: Site No 20

**Item No.6:** The site No 23, carved out in Sy.No.35/1, Konappana Agrahara Village Begur Hobli, Bangalore South Taluk, Measuring East to west 40 feet and North to South 40 feet is bounded on: East by: Site No 24, West by: Road, North by: Private Property, South by: Site No 18.

Given under my hand and seal of the court this 15.4.2019.

By order of the Court, Chief Ministerial Officer Senior Civil Judge's Court, Bangalore Rural District, Bangalore.

Advocate for Plaintiff:
**NAGENDRA MUNIYAPPA**
#130/131, Konappana Agrahara, Krishna Reddy Layout, Electronic City Post, Bangalore -560100.

---

**IN THE COURT OF THE 1st ADDL. SENIOR CIVIL JUDGE, BENGALURU RURAL AT BENGALURU**

**P & S.C. No.11/2019**

**Between:** 1. Smt. Parvathamma, W/o Late K.Ramachandra, aged about 47 years, 2. Sri Ravichandra, S/o Late K. Ramachandra, aged about 24 years, Both are R/at Vasudevapura Village, Tharalu Post, Kanakapura Road, Bengaluru-82. ...**Petitioners**

**And:** 1. Smt. Venkatalakshmi, W/o Late K. Ramachandra, aged about 50 years, 2. Smt. Latha, D/o Late K.Ramachandra, Aged about 32 years, 3. Smt. Saritha, D/o Late K.Ramachandra, aged about 30 years, 4. Sri. Sampangirama, S/o Late K.Ramachandra, aged about 28 years, All are R/at Pattadareddy Palya village, Kaggalipura Post, Kanakapura road, Bengaluru 560 082. ...**Respondents**

**PUBLIC NOTICE**

Whereas the above named petitioners have filed a petition under Section 372(1) of Indian succession Act praying for grant of succession Certificate in respect of the schedule i.e., succeeding to the death benefits of Sri K. Ramachandra who died on 09-12-2018.

Any person having their objections for issue of succession certificate in respect of the schedule in favour of the petitioners and any person having interest may cause the same by appearing before the court in person having interest may cause the same by appearing before the Court in person or through their Advocate on this the **6th day of July 2019** at 11a.m. failing which the matter will be heard and disposed off in accordance with law.

**SCHEDULE**

(1) All the Service and monetary benefits of Sri Ramachandra K. who was working as a Driver in Bengaluru Metropolitan Transport Corporation, Bangalore, with Token No.5838.

(2) All the amount that is lying in the Bank Account of Sri K. Ramachandra at Ravugodlu Vyavasaya Seva Sahakara Sangha Niyamitha, Tharalu, Kaggalipura Branch, Tharalu Post, Bengaluru South Taluk. Bengaluru - 560 082.

(3) All that piece and parcel of the residential property bearing No.12, situated at Pattada Reddy Palya, Kaggalipura Village, Kanakapura Main Road, Uttarahalli Hobli, Bengaluru South Taluk, measuring 30 ft. X 50 ft. totally measuring 1500 square feet, bounded on the: East by: Property of Smt. Fathima, West by: Property of Narayappa, North by: Property of Jayaram, South by Road.

Given under my hand and the seal of the Hon'ble Court on 15-04-2019.

By order of the Court, Chief Ministerial Officer, Senior Civil Judge's Court, Bangalore Rural Dist, Bangalore.

**B.L. LINGARAJU,** Advocate,
No. 317, 3rd Floor, K.S Building, Gandhinagar, Bengaluru-09.

---

ಮಾನ್ಯ ಪ್ರಧಾನ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ, ದೊಡ್ಡಬಳ್ಳಾಪುರ

ಓ.ಎಸ್.ನಂ. 56/2018

[illegible]

ಮತ್ತು

[illegible]

ಸಾರ್ವಜನಿಕ ಪ್ರಕಟಣೆ

[illegible]

---

**BEFORE THE MOTOR ACCIDENT CLAIMS TRIBUNAL AT BENGALURU (SCCH-8)**

**M.V.C. No.9/2019 & M.V.C. No.10/2019**

**Between: Sumanth Kumar B.S ...Petitioner in MVC.No.9/2019**

**Rohit.V ...Petitioner in MVC No.10/2019**

**AND: National Insurance Co. Ltd & another ...Respondents.**

**NOTICE TO RESPONDENT No.2**

**Ravichandra V.** Major S/o Venkateshiah M. Mylar Beedi, Hamshalli Post Shivamogga-577201 (R.C. owner of Swift D'zire Tour Car Bearing Reg. NO.KA-05-AF-8592).

WHEREAS the petitioners have filed the above claim petitions against the respondents, seeking compensation of Rs. 10,00,000/- and Rs.6,00,000/- respectively on account of injuries sustained by them in a road traffic accident, which occurred on 12-12-2018 at about 9.30 PM. on Begur Lake Road, Begur, Bengaluru 560068, due to rash and negligent driving of the driver of the Swift D'zire Tour Car bearing Reg. No. KA-05-AF-8592.

TAKE NOTICE, that you have to appear before this Hon'ble Court on **08.05.2019** at 11.00 A.M. either in person or by Pleader duly instructed to answer all material questions in the petitions. If you failed to appear on the date mentioned above, then the cases will be heard and decided ex-parte.

Given under my hand and seal of the court on the 20.4.2019.

By order of the Court, Asst. Registrar, Court of Small Causes, Bangalore.

**GIRIMALLAIAH & B.N. SHIVALINGAIAH**
Advocates, Bengaluru.

---

**IN THE COURT OF THE PRL. DISTRICT AND SESSION JUDGE AT KOLAR.**

**P & SC No. 24 / 2019.**

**Petitioner : Haseena Begum** D/o K. Nisar Ahmed W/o Azmal Ahmed Aged about 44 years. Residing at Jahangir Masjid, Mask Road, K.R. Puram, Bangalore.

**V/s**

**Respondent : Nil.**

**PUBLIC NOTICE**

Whereas, the petitioner herein above have filed this petition for grant of probate in respect of the schedule properties as per the registered will deed **dt: 03.05.2011** executed by his father K. Nisar Ahmed and he was died **on. 06.12.2016** under section 372 of Indian Succession Act of 1925 in favour of the petitioner in respect of the below schedule amount who have any cline in the schedule amount or interest may affair in this court in person or through by Advocate on **dt: 27.05.2019** 11 A.M before this court to answer the same filing which the petition will dispose of as ex parte.

**SCHEDULE**

Properties are situated at Ward No.9, Fakeerwada, Kolar City, Kolar bearing : Municipal Katha No.275, Assessment No.299, Total measuring (78.9/55)/2x(90+50)/2 out of which 2340 square meters towards Southern side, bounded on. East by : Municipal road, West by : Conservancy road, North by : Nikhath Unnissa Property, South by : Varadarajaswamy Temple.

2. Katha No.275, Assessment No.300/1, East West 35 feet, North South 11 feet out of which East West 35 feet, North South 5 1/2 feet, bounded on. East by : Municipal road, West by : Property of Dobi Narayanappa, North by : Nikhath Unnissa Property, South by : Assessment No.299 property.

Given under my hand and seal of the court this **16th day** of April 2019.

**By order of the Court,**
**Chief administrative office**
**1 Addl District Judge Kolar.**
**Fayaz Ahamed,** Advocate, Kolar.

---

**IN THE COURT OF THE PRL. DISTRICT AND SESSION JUDGE AT KOLAR.**

**P & SC No. 23 / 2019.**

**Petitioner : Smt. Nikhath Umnissa** D/o Late K. Nissar Ahamed W/o Mushtak Ahamed Aged about 38 years. Residing at 240, Ward No.8 Near Nethaji Circle Bagepalli Town and Taluk, Chikkaballapur District.

**V/s**

**Respondent : Nil.**

**PUBLIC NOTICE**

Whereas, the petitioner herein above have filed this petition for grant of probate respect of the schedule properties as per the registered will deed **Dt : 03.05.2011** executed by his father K. Nisar Ahmed and he was died **on : 06.12.2016** under section 372 of Indian Succession Act of 1925 in favour of the petitioner in respect of the below schedule amount who have any cline in the schedule amount or interest may affair this court in person or through by Advocate on **dt: 27.05.2019** 11 AM before his court to answer the same filing which the petition will dispose of as ex parte.

**SCHEDULE**

1. Vacant Site and tiled roofing house, bearing municipal Katha No.275, assessment number 299, measuring 78.9+55/2x90+50/2 out of it northern side 2341 square feet situated at ward no.9, Pakeerwada, Kolar town and Taluk, East by: Municipal Road, West by: Conservancy Road, North by: Assessment No.300/1 property, South by: Property of Haseena begum, and

2. Vacant Site bearing municipal Katha No.275, assessment number 300/1, measuring 35x11 out of it northern side 35x5 1/2 feet, situated at Ward no.9, Pakeerwada Kolar town and Taluk East by: Municipal road, West by Property of Dobi Narayanappa, North by Conservancy Road, South by property of Haseena Begum.

Given under my hand and seal of the court this **16th day** of April 2019.

**By order of the Court,**
**Chief administrative office**
**1 Addl District Judge Kolar.**
**Fayaz Ahamed,** Advocate, Kolar.

---

ಪ್ರಧಾನ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ (ಹಿರಿಯ ವಿಭಾಗ) ಮತ್ತು ಎಂ.ಎ.ಸಿ.ಟಿ. ರವರ ನ್ಯಾಯಾಲಯದಲ್ಲಿ, ಕೃಷ್ಣರಾಜಪೇಟೆ.

ಎಂ.ವಿ.ಸಿ. ಸಂಖ್ಯೆ : 505 / 2018.

[illegible]

ವಿರುದ್ಧ

[illegible]

ತಿದ್ದುಪಡಿ ಪ್ರಕಟಣೆ

[illegible]

ನ್ಯಾಯಾಲಯದ ಆದೇಶದ ಮೇರೆಗೆ,

ಶಿರಸ್ತೇದಾರರು,

ಪ್ರಧಾನ ಸಿವಿಲ್ ನ್ಯಾಯಾಧೀಶರು (ಹಿ.ವಿ) ರವರ ನ್ಯಾಯಾಲಯ, ಕೃಷ್ಣರಾಜಪೇಟೆ.

[illegible]

---

**IN THE COURT OF THE III ADDITIONAL SENIOR CIVIL JUDGE AT TUMAKURU**

**O.S.No.347/2016**

**PLAINTIFFS: Lakshmamma and others**

**V/s**

**DEFENDANTS: Siddagangaiah and others**

**DRAFT PAPER PUBLICATION**

**NOTICE TO DEFENDANT:**

**Kumar** S/o late Rangaiah Aged about 28 years R/o Anchepalya village, Dabaspete Hobli, Bengaluru Rural District.

Whereas the plaintiff filed the above suit against the defendants for relief of partition separate possession with respect to suit property Summons was issued, same was not served on the defendant No 2, and the defendent No. 2 intentionally avoiding to receive the same. Hence you are hereby summoning to appear before the Hon'ble Court in person or by a pleader on 24.05.2019 at 11. a.m. to answer the same, failing which the suit will be disposed of exparte.

**SCHEDULE**

All the piece and parcel of the land bearing Sy.No 20/1 totally measuring 8.04.08.00 acres, including kharab land 0.01.08.00 gunts jatha extent 8.03.00 acres out of which 7.08.00 acres assessed at Rs. 8.89, situated at Haluhosahalli village, Gulur Hobli Tumakuru Taluk, bounded by: EAST: Land of Thimmappa, WEST: Land of Mariguddaiah NORTH: Land of Jayamma and other SOUTH: Remaining land in same survey Number.

Given under my hand and seal the court dated on this day 22nd of April 2019.

**By order of the court**
**Shiristedar, 3rd additional senior civil Judge at tumakuru**
**L.G. Venkateshaiah,** Advocate, Bar Association, Tumkur.
Mo: 9900735044

---

**IN THE COURT OF THE HON'BLE Addl SENIOR CIVIL JUDGE AND JMFC K.G.F.**

**P & S.C. No. 04/2019**

**PETITIONERS: 1. Smt. N. Padma,** W/o. Late. R.Nagaraja, aged about 40 years.

**2. Smt. Tejaswini N.** D/o Late. R. Nagaraja aged about 29 years, Both are R/at Hulibele Village, Bangarpet Taluk, Kolar District.

-V/s-

**RESPONDENTS : Nil.**

**PUBLIC NOTICE**

Whereas, the petitioners herein have filed the above petition for grant of succession certificate to get the death benefits of R. Nagaraja who was working in BMTC, Bangalore and he died on 10-04-2017 at Hulibele village and post, Kasaba Hobli, Bangarpet Taluk, Kolar District. If any person having any interest, they can appear in person or through agent/ pleader on **06.06.2019** at 11.00 'o' clock at Hon'ble Senior Civil Judge & JMFC at K.G.F. In default of your appearance on the day before mentioned the suit will be heard and determined in your absence.

**SCHEDULE**

Rs. 5,00,000/- (Five Lakhs) gratuity, Rs. 300, 000/- (Three Lakhs) group insurance, Rs.5,62,000/- (Five lakh sixty two thousand), Provident fund totally Rs.13,62,000/- (Thirteen lakhs Sixty two Thousand Only).

Given under my hand and seal of the Court this 20.4.2019.

By order of the Court, Sheristadar Senior Civil Judge, and JMFC, KGF.

Advocate for petitioners:
**D.N. PRAKASHA**
1st Floor, Sanjeevappa Building MaluTown, Kolar District.

---

**IN THE COURT OF THE I Addl. SENIOR CIVIL JUDGE, BANGALORE RURAL DISTRICT AT BANGALORE**

**O.S. No. 1879/2014**

**BETWEEN:**

T.S. Srinivas ...**Plaintiff**

**AND:**

Smt. Revamma & others ...**Defendants**

**SUMMONS TO PROPOSED DEFENDANT No. 12**

Mr. Micheal Anthony, S/o Mr. Amalanathan.S., Aged about 39 years, R/at No.28, 1st Floor, 3rd Cross, Vivekananda Nagar, Bengaluru-560 033.

WHEREAS, the plaintiff above named has filed the suit for the suit for partition of the suit schedule properties by metes and bounds and put the plaintiffs in separate possession of their legitimate 1/7th shares. Consequently declare that the registered sale deed dated: 06.03.2006 executed by deceased Pillaanjinamma and defendant's No. 1 to 5 in favour of 6th defendant is bad in law and not binding on the plaintiff to the extent of his undivided share in the suit schedule property and for other relief.

You are hereby summoned to appear before the city **I Addl. SENIOR CIVIL JUDGE, Bengaluru Rural District, Bengaluru** either in person or through an advocate **on 15.06.2019 at 11.00 A.M.** to answer the same failing which the suit will be heard and disposed of Ex-parte on merits.

**SCHEDULE**

All that piece and parcel of land bearing Sy.No. 11/2E, situated Anagalapura Village, Bidarahalli Hobli, Bangalore East Taluk, (Formerly Bangalore South Taluk) Bangalore, to the extent of 01 Acre 21 Guntas, bounded on the:

East: Road, West: Property belongs to Hosahalli Venkatappa, North: Property belongs to Munivenkatappa & others, South: Property belongs to Siddamma.

Giving under my hand and seal of this court on 28th day of March 2019.

**By order of the Court, Chief Ministerial Officer, Senior Civil Judge's Court, Bangalore Rural District.**

Advocate for Plaintiff:
**B. Roopesha,** Advocate
No. 30, Ground Floor, Vishwanatha Rao Road, Madhavanagar, Bangalore - 560 001.

---

ಪ್ರಧಾನ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ (ಹಿರಿಯ ವಿಭಾಗ) ಮತ್ತು ಎಂ.ಎ.ಸಿ.ಟಿ. ರವರ ನ್ಯಾಯಾಲಯದಲ್ಲಿ, ಕೃಷ್ಣರಾಜಪೇಟೆ.

ಎಂ.ವಿ.ಸಿ. ಸಂಖ್ಯೆ : 504 / 2018.

[illegible]

ವಿರುದ್ಧ

[illegible]

ತಿದ್ದುಪಡಿ ಪ್ರಕಟಣೆ

[illegible]

ನ್ಯಾಯಾಲಯದ ಆದೇಶದ ಮೇರೆಗೆ,

ಶಿರಸ್ತೇದಾರರು,

ಪ್ರಧಾನ ಸಿವಿಲ್ ನ್ಯಾಯಾಧೀಶರು (ಹಿ.ವಿ) ರವರ ನ್ಯಾಯಾಲಯ, ಕೃಷ್ಣರಾಜಪೇಟೆ.

[illegible]

---

ಮಾನ್ಯ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಕೋರ್ಟ್, ಬೆಂಗಳೂರು

ಸಿ.ಮಿಸ್.ನಂ. 1649/2019

[illegible]

---

ಮಾನ್ಯ 28ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಗಳ ನ್ಯಾಯಾಲಯ, ಬೆಂಗಳೂರು

ಸಿ.ಮಿಸ್.ನಂ. 1779/2019

[illegible]

---

ಮಾನ್ಯ 28ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಗಳ ನ್ಯಾಯಾಲಯ, ಬೆಂಗಳೂರು

ಸಿ.ಮಿಸ್.ನಂ. 1780/2019

[illegible]

ಲೋಕಸಭಾ ಚುನಾವಣೆ 2019 | ಭಾರತಕ್ಕಾಗಿ ಮತದಾನ

April 23, 2019 ಹಂತ 3

117 ಸಂಸದೀಯ ಕ್ಷೇತ್ರಗಳು

15 ರಾಜ್ಯ

2 ಕೇಂದ್ರಾಡಳಿತ ಪ್ರದೇಶ

ಜಮ್ಮು, ಕಾಶ್ಮೀರ 1 [ಜಮ್ಮು-ಕಾಶ್ಮೀರದ ಅನಂತ್‌ನಾಗ್ ಕ್ಷೇತ್ರದಲ್ಲಿ ಮತ್ತೆ 3,4 ಮತ್ತು 5ನೇ ಹಂತದಲ್ಲಿ ಚುನಾವಣೆಗಳು ನಡೆಯಲಿವೆ]

ಪ.ಬಂಗಾಳ 5, ಬಿಹಾರ 5, ಅಸ್ಸಾಂ 4, ಉತ್ತರ ಪ್ರದೇಶ 10, ಗುಜರಾತ್ 26, ತ್ರಿಪುರ 1, ಒಡಿಶಾ 6, ಛತ್ತೀಸ್‌ಗಢ 7, 1, 1, ಮಹಾರಾಷ್ಟ್ರ 14, ಗೋವಾ 2, ಕರ್ನಾಟಕ 14, ಕೇರಳ 20

| | |
|---|---|
| ಒಟ್ಟು ಮತದಾರರು | 18,85,09,156 |
| ಪುರುಷರು | 9,65,98,912 |
| ಮಹಿಳೆಯರು | 8,62,26,460 |
| ಇತರ | 7,043 |
| ಅಭ್ಯರ್ಥಿಗಳು | 1,640 |
| ಮತಗಟ್ಟೆಗಳು | 2,10,770 |

## 15 ರಾಜ್ಯ, ಕೇಂದ್ರಾಡಳಿತ ಪ್ರದೇಶಗಳಲ್ಲಿ ಹಕ್ಕು ಚಲಾವಣೆ

# 117 ಕ್ಷೇತ್ರಗಳಿಗಿಂದು ಮತ

**ಹೊಸದಿಲ್ಲಿ:** ದೇಶಾದ್ಯಂತ ಮಂಗಳವಾರ ಲೋಕಸಭೆ ಚುನಾವಣೆಯ ಮೂರನೇ ಹಂತದ ಮತದಾನ ಪ್ರಕ್ರಿಯೆ ನಡೆಯಲಿದ್ದು, ಒಟ್ಟು 15 ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳ 117 ಕ್ಷೇತ್ರಗಳಲ್ಲಿ ಮತದಾರರು ತಮ್ಮ ಹಕ್ಕು ಚಲಾಯಿಸಲಿದ್ದಾರೆ. ಗುಜರಾತ್‌ನ ಎಲ್ಲಾ 26, ಕೇರಳದ ಎಲ್ಲಾ 20, ಕರ್ನಾಟಕ ಮತ್ತು ಮಹಾರಾಷ್ಟ್ರದ ತಲಾ 14, ಉತ್ತರಪ್ರದೇಶದ 10, ಛತ್ತೀಸ್‌ಗಢದ ಏಳು, ಒಡಿಶಾದ ಆರು, ಬಿಹಾರ ಮತ್ತು ಪಶ್ಚಿಮ ಬಂಗಾಳದ ತಲಾ ಐದು, ಅಸ್ಸಾಂನ ನಾಲ್ಕು, ಗೋವಾದ ಎರಡು, ಜಮ್ಮು-ಕಾಶ್ಮೀರ, ತ್ರಿಪುರ, ದಾದ್ರಾ-ನಗರ್ ಹವೇಲಿ ಹಾಗೂ ದಿಯು ಮತ್ತು ದಾಮನ್‌ನಲ್ಲಿ ತಲಾ ಒಂದೊಂದು ಕ್ಷೇತ್ರಗಳಲ್ಲಿ ಮತದಾನ ನಡೆಯಲಿದೆ.

ತ್ರಿಪುರದ ಪೂರ್ವ ಕ್ಷೇತ್ರದಲ್ಲಿ ಶಾಂತಿ ಸುವ್ಯವಸ್ಥೆಗೆ ಧಕ್ಕೆಯುಂಟಾದ ಕಾರಣ ಎರಡನೇ ಹಂತದ ಮತದಾನ ಪ್ರಕ್ರಿಯೆ ಸ್ಥಗಿತಗೊಂಡಿತ್ತು. ಹೀಗಾಗಿ ಆ ಕ್ಷೇತ್ರಗಳಿಗೂ ಮಂಗಳವಾರವೇ ಮತದಾನ ನಡೆಯಲಿದೆ.

### ಡಾ.ಸಿಂಗ್ ಮತದಾನ

ಹಿರಿಯ ಕಾಂಗ್ರೆಸ್ ನಾಯಕ, ಮಾಜಿ ಪ್ರಧಾನಿ ಡಾ.ಮನಮೋಹನ್ ಸಿಂಗ್ ಅವರು ಮಂಗಳವಾರ ಇಲ್ಲಿ ತಮ್ಮ ಮತದಾನ ಚಲಾಯಿಸಲಿದ್ದಾರೆ. ಅಸ್ಸಾಂನಲ್ಲಿ ನಡೆಯುವ ಕೊನೆಯ ಹಂತದ, ದೇಶದಲ್ಲಿ ನಡೆಯುತ್ತಿರುವ ಮೂರನೇ ಹಂತದ ಲೋಕಸಭಾ ಚುನಾವಣೆ ಆಗಿದೆ. ತಮ್ಮ ಪತ್ನಿ ಗುರುಶರಣ್ ಕೌರ್ ಅವರೊಂದಿಗೆ ಇಲ್ಲಿನ ಸೂಪರ್ ಮಾರ್ಕೆಟ್ ಪ್ರದೇಶದಲ್ಲಿರುವ ಶಾಲೆಯ ಮತಗಟ್ಟೆಯೊಂದರಲ್ಲಿ ಮತಚಲಾಯಿಸಲಿದ್ದಾರೆ.

### ಪ್ರಮುಖ ನಾಯಕರಿಂದ ಮತ ಚಲಾವಣೆ

**ಗಾಂಧಿನಗರ:** ಆಡಳಿತರೂಢ ಬಿಜೆಪಿ, ವಿರೋಧ ಪಕ್ಷ ಕಾಂಗ್ರೆಸ್ ಸೇರಿದಂತೆ ಇತರೆ ಪಕ್ಷಗಳ ಅನೇಕ ಪ್ರಮುಖ ನಾಯಕರು ಮೂರನೇ ಹಂತದ ಚುನಾವಣೆಯಲ್ಲಿ ತಮ್ಮ ಮತ ಚಲಾಯಿಸಲಿದ್ದಾರೆ ಎನ್ನುವುದು ವಿಶೇಷ. ಪ್ರಧಾನಿ ನರೇಂದ್ರ ಮೋದಿ ಸೇರಿದಂತೆ ಬಿಜೆಪಿಯ ಅನೇಕ ನಾಯಕರು ಗುಜರಾತ್‌ನಲ್ಲಿ ಮತ ಚಲಾಯಿಸಲಿದ್ದಾರೆ. ಮತ ಚಲಾಯಿಸುವುದಕ್ಕಾಗಿ ಸೋಮವಾರ ತಡರಾತ್ರಿ ಪ್ರಧಾನಿ ಮೋದಿ ಅವರು ಅಹ್ಮದಾಬಾದ್ ತಲುಪಿ, ಮಂಗಳವಾರ ಬೆಳಗ್ಗೆ ರಾಣಿಪ್ ಕ್ಷೇತ್ರದ ಪ್ರಾಥಮಿಕಶಾಲೆಯೊಂದರಲ್ಲಿ ಮತದಾನ ಮಾಡಲಿದ್ದಾರೆ. ಬಿಜೆಪಿ ರಾಷ್ಟ್ರೀಯ ಅಧ್ಯಕ್ಷ ಅಮಿತ್ ಶಾ ಕೂಡ ಗುಜರಾತ್‌ನವರೇ ಆಗಿರುವುದರಿಂದ ಅಹ್ಮದಾಬಾದ್‌ನ ನಾರಾಯಣಪುರ ಕ್ಷೇತ್ರದಲ್ಲಿ ಕುಟುಂಬ ಸಮೇತ ಮತ ಚಲಾಯಿಸಲಿದ್ದಾರೆ. ಹಣಕಾಸು ಸಚಿವ ಅರುಣ್ ಜೇಟ್ಲಿ ಅಹ್ಮದಾಬಾದ್‌ನ ವೇಜಲ್ ಪುರದ ಚಮನ್ ಭಾಯಿ ಇನ್‌ಸ್ಟಿಟ್ಯೂಟ್‌ನಲ್ಲಿ ಮತ ಚಲಾಯಿಸಲಿದ್ದಾರೆ. ಬಿಜೆಪಿಯ ಹಿರಿಯ ಮುಖಂಡ ಲಾಲ್ ಕೃಷ್ಣ ಅಡ್ವಾಣಿ, ಅಹ್ಮದಾಬಾದ್‌ನ ಖಾನ್‌ಪುರದ ಹಿಂದಿ ಪ್ರಾಥಮಿಕಶಾಲೆಯಲ್ಲಿ ತಮ್ಮ ಹಕ್ಕು ಚಲಾಯಿಸಲಿದ್ದಾರೆ.


### ಪ್ರಮುಖ ಪಕ್ಷಗಳು

ಅಸ್ಸಾಂ: ಬಿಜೆಪಿ, ಕಾಂಗ್ರೆಸ್ ಅಸೋಮ್ ಗಣ ಪರಿಷದ್(ಎಜಿಪಿ)
ಬಿಹಾರ: ಕಾಂಗ್ರೆಸ್, ಬಿಜೆಪಿ, ಆರ್‌ಜೆಡಿ, ಎಲ್‌ಜೆಪಿ, ಜನತಾದಳ, ಜೆಡಿಯು
ಛತ್ತೀಸ್‌ಗಢ: ಬಿಜೆಪಿ, ಕಾಂಗ್ರೆಸ್, ಜನತಾ ಕಾಂಗ್ರೆಸ್ ಛತ್ತೀಸ್‌ಗಢ, ಬಿಎಸ್‌ಪಿ
ದಾದ್ರಾ-ನಗರ ಹವೇಲಿ: ಕಾಂಗ್ರೆಸ್, ಬಿಜೆಪಿ
ದಿಯು-ದಾಮನ್: ಕಾಂಗ್ರೆಸ್, ಬಿಜೆಪಿ, ಬಿಎಸ್‌ಪಿ, ಎನ್‌ಸಿಪಿ
ಗೋವಾ: ಯುಜಿಡಿಪಿ, ಎನ್‌ಸಿಪಿ, ಎಂಜಿಪಿ, ಕಾಂಗ್ರೆಸ್, ಬಿಜೆಪಿ
ಗುಜರಾತ್: ಕಾಂಗ್ರೆಸ್, ಬಿಜೆಪಿ
ಕರ್ನಾಟಕ: ಕಾಂಗ್ರೆಸ್, ಬಿಜೆಪಿ, ಜೆಡಿಎಸ್
ಕೇರಳ: ಕಾಂಗ್ರೆಸ್, ಬಿಜೆಪಿ, ಸಿಪಿಎಂ, ಇಂಡಿಯನ್ ಯೂನಿಯನ್ ಮುಸ್ಲಿಂ ಲೀಗ್, ಕೇರಳ ಕಾಂಗ್ರೆಸ್ ಪಕ್ಷ
ಮಹಾರಾಷ್ಟ್ರ: ಕಾಂಗ್ರೆಸ್, ಬಿಜೆಪಿ, ಶಿವಸೇನಾ, ಎನ್‌ಸಿಪಿ, ಎಐಎಂಐಎಂ
ಒಡಿಶಾ: ಕಾಂಗ್ರೆಸ್, ಬಿಜೆಪಿ, ಬಿಜೆಡಿ, ಸಿಪಿಐ
ಉತ್ತರಪ್ರದೇಶ: ಬಿಜೆಪಿ, ಕಾಂಗ್ರೆಸ್, ಎಸ್‌ಪಿ, ಬಿಎಸ್‌ಪಿ
ಜಮ್ಮು-ಕಾಶ್ಮೀರ: ಕಾಂಗ್ರೆಸ್, ಬಿಜೆಪಿ, ಎನ್‌ಸಿ, ಪಿಡಿಪಿ
ಪಶ್ಚಿಮ ಬಂಗಾಳ: ಕಾಂಗ್ರೆಸ್, ಸಿಪಿಎಂ, ಬಿಜೆಪಿ, ಟಿಎಂಸಿ
ತ್ರಿಪುರ: ಕಾಂಗ್ರೆಸ್, ಬಿಜೆಪಿ ಮತ್ತು ಸಿಪಿಎಂ

# ಮುಸ್ಲಿಮರಿಗೂ ಕೆಲಸ ಮಾಡಿ ಕೊಡುವೆ

**ಫಿಲಿಭಿತ್:** ಲೋಕಸಭಾ ಚುನಾವಣೆಯಲ್ಲಿ ಮುಸ್ಲಿಂ ಸಹೋದರ ಸಹೋದರಿಯರು ನನಗೆ ಮತ ಕೊಡದಿದ್ದರೂ, ನಾನು ಜನರ ಪರವಾಗಿ ಕೆಲಸ ಮಾಡುತ್ತೇನೆ ಎಂದು ಬಿಜೆಪಿ ಅಭ್ಯರ್ಥಿ ವರುಣ್ ಗಾಂಧಿ ಹೇಳಿದ್ದಾರೆ.

ಚುನಾವಣಾ ಸಭೆಯಲ್ಲಿ ಮಾತನಾಡಿದ ಅವರು, ತಾಯಿ ಮನೇಕಾ ಗಾಂಧಿ ಅವರ ಇತ್ತೀಚಿನ ಹೇಳಿಕೆಗೆ ತದ್ವಿರುದ್ಧವಾಗಿ ಮಾತನಾಡಿರುವುದು ಎಲ್ಲರ ಕಣ್ಣು ಹುಬ್ಬೇರುವಂತೆ ಮಾಡಿದೆ.

ಈ ಚುನಾವಣೆಯಲ್ಲಿ ಮುಸ್ಲಿಂ ಸಹೋದರ ಸಹೋದರಿಯರು ನನಗೆ ಮತ ಕೊಟ್ಟರೆ ಬಹಳ ಸಂತೋಷ, ಒಂದು ವೇಳೆ ಕೊಡದೇ ಹೋದರೆ ಸಮಸ್ಯೆ ಏನೂ ಇಲ್ಲ. ಆದಾಗ್ಯೂ ನಾನು ನಿಮ್ಮ ಪರವಾಗಿ ಕೆಲಸ ಮಾಡುತ್ತೇನೆ. ನಿಮ್ಮ ಜೊತೆ ಇರಲು ಬಯಸುತ್ತೇನೆ ಎಂದು ಹೇಳಿದ್ದಾರೆ.

ಕಳೆದ ವಾರ ಮನೇಕಾ ಗಾಂಧಿ ಅವರು ಈ ಬಾರಿಯ ಚುನಾವಣೆಯಲ್ಲಿ ಮುಸ್ಲಿಂ ಸಮುದಾಯ ನಮಗೆ ಮತ ಕೊಡದೇ ಅನಂತರ ಯಾವುದಾದರೂ ಕೆಲಸ ಮಾಡಿಕೊಡಿ ಎಂದು ನನ್ನ ಬಳಿ ಬಂದರೆ, ನನಗೆ ಕೋಪ ಬರುತ್ತದೆ. ಆದ್ದರಿಂದ ನನ್ನ ಬಳಿ ಬರುವ ಮುನ್ನ ಮತ ಕೊಡಿ, ಗೆಲುವಿಗೆ ಸಹಕರಿಸಿ ಎಂದು ಎಚ್ಚರಿಕೆಯ ರೀತಿಯಲ್ಲಿ ಮಾತನಾಡಿರುವುದನ್ನು ವಿರೋಧಿಗಳು ಪ್ರಚಾರಕ್ಕೆ ಬಳಸಿಕೊಂಡಿದ್ದರು.

ಈ ಹಿನ್ನೆಲೆಯಲ್ಲಿ ಚುನಾವಣಾ ಆಯೋಗ ಅವರಿಗೆ ಶೋಕಾಸ್ ನೋಟಿಸ್ ಜಾರಿ ಮಾಡಿ, 72 ಗಂಟೆಗಳ ಕಾಲ ಚುನಾವಣಾ ಪ್ರಚಾರ ಕಾರ್ಯದಿಂದ ದೂರ ಇರುವಂತೆ ನಿರ್ಬಂಧ ಹಾಕಿತ್ತು. ಮನೇಕಾ ಗಾಂಧಿಯ ಮಾತು ದೇಶದಲ್ಲಿ ಸಂಚಲನ ಮೂಡಿಸಿರುವಾಗಲೇ ಅವರ ಪುತ್ರ ವರುಣ್ ಗಾಂಧಿ ಮಾತುಗಳ ಬಗ್ಗೆ ಸಾಮಾಜಿಕ ಜಾಲತಾಣ ಸೇರಿದಂತೆ ಎಲ್ಲ ಕಡೆಯಿಂದ ಮೆಚ್ಚುಗೆಯ ಮಾತುಗಳು ಕೇಳಿ ಬರುತ್ತಿವೆ.

# ಪ.ಬಂಗಾಳ, ಉ.ಪ್ರದಲ್ಲಿ ಬಿಜೆಪಿ ಸಾಧನೆ ವರ್ಧನೆ

**ಹೊಸದಿಲ್ಲಿ:** ದೇಶದಲ್ಲಿ ಈಗ ನಡೆಯುತ್ತಿರುವ ಮಹಾ ಚುನಾವಣೆಯಲ್ಲಿ ಉತ್ತರ ಬಂಗಾಳ ಮತ್ತು ಪಶ್ಚಿಮ ಉತ್ತರ ಪ್ರದೇಶದ ಭಾಗಗಳು ಭಾರತೀಯ ಜನತಾ ಪಾರ್ಟಿ (ಬಿಜೆಪಿ)ಗೆ ಮಾರ್ಗದರ್ಶಿ ವಲಯಗಳಾಗಲಿವೆ ಎಂಬುದಕ್ಕೆ ಹಲವು ನಂಬಲರ್ಹ ಕಾರಣಗಳು ಪುಷ್ಟಿ ನೀಡುತ್ತವೆ.

ಬಂಗಾಳದಲ್ಲಿ ಎಂದೂ ಬಿಜೆಪಿ ತನ್ನ ಹೆಜ್ಜೆ ಊರಿಲ್ಲ. 2014ರಲ್ಲಿ ತನ್ನ ಅತ್ಯುತ್ತಮ ಸಾಧನೆಯ ಸಮಯದಲ್ಲೂ ಶೇ. 17ರಷ್ಟು ಗರಿಷ್ಠ ಮತಪಾಲನ್ನು ಪಡೆದಿದ್ದರೂ ಅದು ಕೇವಲ ಎರಡು ಲೋಕಸಭಾ ಸ್ಥಾನಗಳನ್ನು ಗೆಲ್ಲುವಲ್ಲಿ ಶಕ್ತವಾಗಿತ್ತು. ಅದರಲ್ಲಿ ಒಂದನ್ನು ಪ್ರಾದೇಶಿಕ ಪಕ್ಷ ಗೋರ್ಖಾ ಜನಮುಕ್ತಿ ಮೋರ್ಚಾ (ಜಿಜೆಎಂ) ಬೆಂಬಲದೊಂದಿಗೆ ಗೆದ್ದಿತ್ತು.

ಬಂಗಾಳವು ಭಾರತದ ಆಡಳಿತಾರೂಢ ಪಕ್ಷಕ್ಕೆ ಒಂದು ಹೊಸ ಹೆಜ್ಜೆ ಹಾಕಿನ ಹುಲ್ಲುಗಾವಲು ಎಂದು ಭಾವಿಸಲಾಗಿದೆ. ಉತ್ತರ, ಮಧ್ಯ ಮತ್ತು ಪಶ್ಚಿಮ ಭಾರತದಲ್ಲಿ ಏನೇ ನಷ್ಟ ಉಂಟಾದರೂ ಪೂರ್ವ ರಾಜ್ಯಗಳಲ್ಲಿನ ಗಳಿಕೆಯಿಂದ ಅದು ಸರಿದೂಗಲಿದೆ ಎಂದು ಅನೇಕ ಬಿಜೆಪಿ ನಾಯಕರು ಹೇಳುತ್ತಿದ್ದಾರೆ. ಐದು ವರ್ಷಗಳ ಹಿಂದೆ ಉತ್ತರ, ಮಧ್ಯ ಮತ್ತು ಪಶ್ಚಿಮ ಭಾರತದಲ್ಲಿ ಬಿಜೆಪಿ ಅಧಿಕ ಸ್ಥಾನಗಳನ್ನು ತನ್ನದಾಗಿಸಿಕೊಂಡಿತ್ತು.

ರಾಜ್ಯವು ತೃಣಮೂಲ ಕಾಂಗ್ರೆಸ್ ನಾಯಕಿ ಮಮತಾ ಬ್ಯಾನರ್ಜಿಯ ಪ್ರಬಲ ನಿಯಂತ್ರಣದಡಿ ಇದೆ. ಅಲ್ಲದೆ ಬಿಜೆಪಿಯನ್ನು ಭಾರತದ ಹಿಂದಿ ಭಾಷೆ ಮಾತನಾಡುವ ಜನರ ಒಂದು ಪಕ್ಷ ಎಂಬ ನೆಲೆಯಲ್ಲಿ ಬಹಳವಾಗಿ ತಿರಸ್ಕರಿಸಲ್ಪಟ್ಟಿದೆ. ಬಂಗಾಳದಲ್ಲಿ ಬಿಜೆಪಿ ಉತ್ತಮ ಸಾಧನೆ ಮಾಡಬೇಕಾದರೆ ಅದು ರಾಜ್ಯದ ಉತ್ತರದ ಭಾಗದಲ್ಲಿ ಉತ್ಕೃಷ್ಟ ಸಾಧನೆ ಮಾಡಬೇಕಾಗಿದೆ. ಅಲ್ಲಿ ಅದಕ್ಕೆ ಅತ್ಯಂತ ಹೆಚ್ಚು ಬೆಂಬಲಿಗರಿದ್ದಾರೆ.

**ಅಚ್ಛೇ ದಿನ್‌ಗಳಲ್ಲಿ ಮೋದಿ ಸಫಲ:** ಇದೇ ವೇಳೆ, ಭಾರತದ ಅತ್ಯಂತ ಹೆಚ್ಚು ಜನಸಂಖ್ಯೆ ಇರುವ ರಾಜ್ಯವಾದ ಉತ್ತರ ಪ್ರದೇಶ 80 ಲೋಕಸಭಾ ಸ್ಥಾನಗಳನ್ನು ಹೊಂದಿದೆ. ಅದರ ದೊಡ್ಡ ಗಾತ್ರ ಮತ್ತು 2014ರ ಲೋಕಸಭಾ ಚುನಾವಣೆಯಲ್ಲಿ ಮತ್ತು 2017ರ ವಿಧಾನಸಭಾ ಚುನಾವಣೆಯಲ್ಲಿ ಬಿಜೆಪಿಯ ಭರ್ಜರಿ ವಿಜಯದ ಕಾರಣದಿಂದ ಉತ್ತರ ಪ್ರದೇಶವು ಅತ್ಯಂತ ಹೆಚ್ಚು ಮಹತ್ವ ಹೊಂದಿದೆ.

ಈ ಎರಡು ವಲಯಗಳಲ್ಲಿ 2014ರಲ್ಲಿದ್ದಂತೆ ಈ ಚುನಾವಣೆಯಲ್ಲಿ ಪ್ರಬಲ ಮೋದಿ ಅಲೆ ಇರುವುದು ಕಂಡು ಬಂದಿದೆ. ಪ್ರಧಾನಿ ಮೋದಿಯವರು ತನ್ನ ವೈಯಕ್ತಿಕ ಆಡಳಿತ ವಿರೋಧಿ ಅಲೆಯನ್ನು ನಿವಾರಿಸುವಲ್ಲಿ ಯಶಸ್ವಿಯಾಗಿದ್ದಾರೆಂಬಂತೆ ಕಂಡು ಬರುತ್ತಿದೆ. ಅವರಿಗೆ ವೋಟು ಹಾಕಿದವರು ಅವರಿಗೆ ನಿಷ್ಠರಾಗಿ ಉಳಿದಿದ್ದಾರೆ. ಈ ಎರಡೂ ವಲಯಗಳಲ್ಲಿ ಮೋದಿಯವರ ಹೆಸರು ಬಿಜೆಪಿ ಬೆಂಬಲಿಗರಲ್ಲಿ ಆಶಾವಾದವನ್ನು ಮುಂದುವರಿಸಿದೆ.

# ಕೊನೆಯ ಹಂತದ ಲೋಕಸಭಾ ಚುನಾವಣೆಗೆ ಅಧಿಸೂಚನೆ

**ಹೊಸದಿಲ್ಲಿ:** ಲೋಕಸಭಾ ಚುನಾವಣೆಯ ಏಳನೇ ಮತ್ತು ಕೊನೆಯ ಹಂತದ ಮತದಾನಕ್ಕಾಗಿ ಚುನಾವಣಾ ಆಯೋಗ ಸೋಮವಾರ ಅಧಿಸೂಚನೆ ಹೊರಡಿಸಿದೆ. 8 ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶದ 59 ಕ್ಷೇತ್ರಗಳಲ್ಲಿ ಕೊನೆಯ ಹಂತದ ಮತದಾನವಾಗಲಿದೆ. ಏಪ್ರಿಲ್ 11ರಂದು ಲೋಕಸಭಾ ಚುನಾವಣೆಯ ಮೊದಲ ಹಂತದ ಮತದಾನ ನಡೆದಿದ್ದು ಮೇ 19ರಂದು ಕೊನೆಯ ಹಂತದ ಮತದಾನವಾಗಲಿದೆ. ಈ ವರೆಗೆ ಎರಡು ಹಂತಗಳ ಮತದಾನ ಮಾತ್ರ ಮುಗಿದಿದೆ. ಮೂರನೇ ಹಂತದ ಮತದಾನ ಏಪ್ರಿಲ್ 23ರಂದು ನಡೆಯುತ್ತದೆ. ಮೇ 19ರ ಕೊನೆಯ ಹಂತದ ಮತದಾನದಲ್ಲಿ ಪಂಜಾಬ್‌ನ ಎಲ್ಲಾ 13 ಸ್ಥಾನ, ಹಿಮಾಚಲ ಪ್ರದೇಶದ 4 ಸ್ಥಾನ ಮತ್ತು ಚಂಡೀಗಢದ ಒಂದು ಸ್ಥಾನಕ್ಕೆ ಒಂದೇ ಹಂತದಲ್ಲಿ ಮತ ಚಲಾಯಿಸಲಾಗುತ್ತದೆ.

# ಮೋದಿ ನಾಯಕತ್ವದಡಿ ಬಲಿಷ್ಠ ಭಾರತ: ಯೋಗಿ

**ಬಲ್ಲಾಂಪುರ್ / ಬಾಂಗಾಂವ್ (ಪ.ಬಂ.):** ಮೋದಿಜಿ ಕಿ ಸೇನಾ ಎಂದು ಚುನಾವಣಾ ಪ್ರಚಾರ ವೇಳೆ ಉತ್ತರ ಪ್ರದೇಶದ ಮುಖ್ಯಮಂತ್ರಿ ಯೋಗಿ ಆದಿತ್ಯನಾಥ್ ದೇಶದ ರಕ್ಷಣಾ ಪಡೆಯನ್ನು ಉಲ್ಲೇಖಿಸಿದ್ದಕ್ಕೆ ಚುನಾವಣಾ ಆಯೋಗದ ವಾಗ್ದಂಡನೆ ಎದುರಿಸಿದ ನಂತರ ಪ್ರಚಾರವನ್ನು ತಗ್ಗಿಸಿದ್ದಾರೆ. ಸೋಮವಾರ ಇಲ್ಲಿ ಪ್ರಚಾರ ನಡೆಸಿದಾಗ ಪ್ರಧಾನಿ ನರೇಂದ್ರ ಮೋದಿ ನಾಯಕತ್ವದಡಿ ಭಾರತೀಯ ಸೇನೆ ಬಲಿಷ್ಠ ಭಾರತವನ್ನು ನಿರ್ಮಿಸಲಿದೆ ಎಂದು ಹೇಳಿದ್ದಾರೆ.

ಕಾಂಗ್ರೆಸ್ ಆಡಳಿತದ ಅವಧಿಯಲ್ಲಿ ಭಾರತೀಯರ ಏನೆಗೆ ಅಂಜದ ಚೀನಾದ ಸೈನಿಕರು ಭಾರತೀಯ ಭೂಪ್ರದೇಶವನ್ನು ಎಗ್ಗಿಲ್ಲದೆ ಅತಿಕ್ರಮಿಸುತ್ತಿದ್ದರು. ಆದರೆ ಮೋದಿ ನಾಯಕತ್ವದಡಿ ಭಾರತೀಯ ಸೇನೆ ಡೋಕ್ಲಾಂ ಬಿಕ್ಕಟ್ಟಿನ ವೇಳೆ ದಿಟ್ಟತನ ತೋರಿಸಿತೆಂದು ಆದಿತ್ಯನಾಥ್ ಅಭಿಪ್ರಾಯಪಟ್ಟರು. ಡೋಕ್ಲಾಂನಲ್ಲಿ ಭಾರತೀಯ ಭೂ ಪ್ರದೇಶದ ಅತಿಕ್ರಮಣಕ್ಕೆ ಚೀನಾದ ಸೈನಿಕರಿಗೆ ಭಾರತೀಯ ಸೇನೆ ತಡೆ ಒಡ್ಡಿತ್ತು. ಬಲಿಷ್ಠ ಸರಕಾರದಡಿ ಸೇನೆಗೂ ಧೈರ್ಯ, ಸ್ಥೈರ್ಯ ಹೆಚ್ಚು ಬರುತ್ತದೆ ಎಂದು ಯೋಗಿ ತಿಳಿಸಿದರು.

ಪುಲ್ವಾಮದಲ್ಲಿ ಉಗ್ರರು ದಾಳಿ ನಡೆಸಿದ್ದ 72 ತಾಸುಗಳೊಳಗೆ ಪಾಕ್ ನೆಲದಲ್ಲಿ, ಬಾಲಕೋಟ್‌ನಲ್ಲಿದ್ದ ಉಗ್ರರ ಶಿಬಿರವನ್ನೆಲ್ಲ ಭಾರತೀಯ ವಾಯುಪಡೆ ಧ್ವಂಸಗೊಳಿಸಿತ್ತು. 250ಕ್ಕೂ ಹೆಚ್ಚು ಉಗ್ರರು ಬಾಲಾಕೋಟ್‌ನಲ್ಲಿ ಹತರಾಗಿದ್ದರೆಂದರು ಯೋಗಿ. ಇಂತಹ ದಿಟ್ಟ ನಿರ್ಧಾರದೊಂದಿಗೆ ಮೊದಲ ಬಾರಿ ಭಾರತ ಸರಕಾರ ಪ್ರತೀಕಾರದ ದಾಳಿ ನಡೆಸಿತ್ತೆಂದರು. ದೇಶದ 130 ಕೋಟಿ ಜನರ ಭದ್ರತೆಯೊಂದಿಗೆ ಕಾಂಗ್ರೆಸ್ ಪಕ್ಷ ಚೆಲ್ಲಾಟ ನಡೆಸುತ್ತಿದೆ. ಕಾಂಗ್ರೆಸ್ ತನ್ನ ಪ್ರಣಾಳಿಕೆಯಲ್ಲಿ ಸಶಸ್ತ್ರ ಪಡೆಗಳ ವಿಶೇಷ ಅಧಿಕಾರ ಕಾಯ್ದೆಯನ್ನು ಪುನರ್‌ಮರ್ಶಿಸುವುದಕ್ಕೆ ಸಿದ್ಧ ಹಾಗೂ ಎಂಬ ಭರವಸೆ ನೀಡಿರುವುದು ರಾಷ್ಟ್ರ ಭದ್ರತೆಗೆ ಅಪಾಯಕಾರಿ ಎಂದು ಯೋಗಿ ತಿಳಿಸಿದರು. ಪ್ರಧಾನಿ ಮೋದಿಯವರ ಸಬ್ ಕಾ ಸಾಥ್ ಸಬ್ ಕಾ ವಿಕಾಸ್ ಘೋಷಣೆ ಸರ್ವ ಸಮಾನತೆಯ ಭಾವ ಉಳ್ಳದ್ದೆಂದರು.

# ಮೋದಿ ಬಯೋಪಿಕ್: ಸುಪ್ರೀಂಗೆ ಚುನಾವಣಾ ಆಯೋಗ ವರದಿ

**ಹೊಸದಿಲ್ಲಿ:** ಪ್ರಧಾನಿ ನರೇಂದ್ರ ಮೋದಿ ಜೀವನಾಧಾರಿತ ಚಿತ್ರ ಪಿಎಂ ನರೇಂದ್ರ ಮೋದಿ ಬಗ್ಗೆ ಚುನಾವಣಾ ಆಯೋಗ ಸವಿವರವಾದ ವರದಿಯನ್ನು ಸೋಮವಾರ ಸುಪ್ರೀಂಕೋರ್ಟ್‌ಗೆ ಸಲ್ಲಿಸಿದೆ.

ಚುನಾವಣಾ ಆಯೋಗ ಸಲ್ಲಿಸಿದ್ದ ವರದಿ ಸ್ವೀಕರಿಸಿದ ಮುಖ್ಯ ನ್ಯಾಯಮೂರ್ತಿ ರಂಜನ್ ಗೊಗೊಯ್, ನ್ಯಾಯಮೂರ್ತಿಗಳಾದ ದೀಪಕ್ ಗುಪ್ತಾ ಮತ್ತು ಸಂಜೀವ್ ಖನ್ನಾ ಇದ್ದ ತ್ರಿಸದಸ್ಯ ನ್ಯಾಯಪೀಠ ವರದಿಯ ಪ್ರತಿಯೊಂದನ್ನು ಚಿತ್ರದ ನಿರ್ಮಾಪಕರಿಗೂ ಸಲ್ಲಿಸುವಂತೆ ಸೂಚನೆ ನೀಡಿತು. ಚಿತ್ರದ ಬಿಡುಗಡೆ ಮೇಲೆ ಹೇರಲಾಗಿರುವ ನಿಷೇಧ ಪ್ರಶ್ನಿಸಿ ನಿರ್ಮಾಪಕರು ಸಲ್ಲಿಸಿರುವ ಅರ್ಜಿ ವಿಚಾರಣೆಯನ್ನು ಏ.26ಕ್ಕೆ ನಿಗದಿಪಡಿಸಿದೆ.ಪ್ರಸ್ತುತ ದೇಶಾದ್ಯಂತ ಲೋಕಸಭಾ ಚುನಾವಣೆಯು ನಡೆಯುತ್ತಿರುವ ಹಿನ್ನೆಲೆಯಲ್ಲಿ ಮೋದಿ ಜೀವನಾಧಾರಿತ ಚಿತ್ರ ಬಿಡುಗಡೆ ನೀತಿ ಸಂಹಿತೆ ಉಲ್ಲಂಘನೆ ಮಾಡುವ ಸಾಧ್ಯತೆ ಇದೆ ಎಂದು ಆರೋಪಿಸಿದ ಚುನಾವಣಾ ಆಯೋಗ ನಿಷೇಧ ಹೇರಿತ್ತು. ತನ್ನ ನಿರ್ಧಾರ ಮರು ಪರಿಶೀಲಿಸುವಂತೆ ಏ.15ರಂದು ಸುಪ್ರೀಂಕೋರ್ಟ್ ಆಯೋಗಕ್ಕೆ ಆದೇಶಿಸಿತ್ತು. ಅಷ್ಟೇ ಅಲ್ಲದೇ ಚಿತ್ರವನ್ನು ಸಂಪೂರ್ಣವಾಗಿ ವೀಕ್ಷಿಸಿದ ಬಳಿಕ ಸೂಕ್ತ ನಿರ್ಧಾರ ಕೈಗೊಳ್ಳುವಂತೆ ನಿರ್ದೇಶನವನ್ನು ನೀಡಿತ್ತು.

# ವಿರೋಧಿಗಳ ಮೇಲೆ ಹಲ್ಲೆ; ಕನ್ಹಯ್ಯ ವಿರುದ್ಧ ಎಫ್‌ಐಆರ್

**ಬೇಗುಸರೈ:** ತಮ್ಮ ವಿರುದ್ಧ ಕಪ್ಪು ಬಾವುಟ ತೋರಿಸಿದ ಜನರ ಮೇಲೆ ಹಲ್ಲೆ ನಡೆಸಿದ ಆರೋಪಕ್ಕೆ ಸಂಬಂಧಿಸಿದಂತೆ ಬಿಹಾರದ ಬೇಗುಸರೈ ಲೋಕಸಭಾ ಕ್ಷೇತ್ರದ ಸಿಪಿಐ ಅಭ್ಯರ್ಥಿ ಕನ್ಹಯ್ಯ ಕುಮಾರ್ ಹಾಗೂ 17 ಬೆಂಬಲಿಗರ ವಿರುದ್ಧ ಅಲ್ಲಿನ ಘರ್ ಪುರ ಪೊಲೀಸ್ ಠಾಣೆಯಲ್ಲಿ ಎಫ್‌ಐಆರ್ ದಾಖಲಾಗಿದೆ.

ಭಾನುವಾರ ಸಂಜೆ ಕನ್ಹಯ್ಯ ಕುಮಾರ್ ಅವರು ರೋಡ್ ಶೋನಲ್ಲಿ ತೊಡಗಿದ್ದ ವೇಳೆ, ಕೆಲವರು ಅವರನ್ನು ವಿರೋಧಿಸಿ ಕಪ್ಪು ಬಾವುಟ ತೋರಿದ್ದರು. ಇದರಿಂದ ಆಕ್ರೋಶಗೊಂಡ ಕನ್ಹಯ್ಯ ಹಾಗೂ ಸಂಗಡಿಗರು ಅವರೊಂದಿಗೆ ವಾಗ್ವಾದಕ್ಕಿಳಿದಿದ್ದಲ್ಲದೆ, ದೈಹಿಕವಾಗಿ ಹಲ್ಲೆ ನಡೆಸಿದ್ದರು. ಈ ಸಂಬಂಧ ಅವರ ಹಾಗೂ 17 ಬೆಂಬಲಿಗರ ವಿರುದ್ಧ ಪ್ರಕರಣ ದಾಖಲಾಗಿದೆ. ಕನ್ಹಯ್ಯ ಅವರು ಬೇಗುಸರೈ ಕ್ಷೇತ್ರದಲ್ಲಿ ಬಿಜೆಪಿಯ ಫೈರ್ ಬ್ರಾಂಡ್ ನಾಯಕ ಮತ್ತು ಕೇಂದ್ರ ಸಚಿವ ಗಿರಿರಾಜ್ ಸಿಂಗ್ ಹಾಗೂ ಆರ್‌ಜೆಡಿ ಅಭ್ಯರ್ಥಿ ತನ್ವೀರ್ ಹಸನ್ ವಿರುದ್ಧ ಸ್ಪರ್ಧಿಸುತ್ತಿದ್ದಾರೆ.

## ಕಿರು ಸುದ್ದಿ

### ದಿಲ್ಲಿಯಲ್ಲಿ ಕಾಂಗ್ರೆಸ್ ಏಕಾಂಗಿ ಸ್ಪರ್ಧೆ

**ಹೊಸದಿಲ್ಲಿ:** ಕಾಂಗ್ರೆಸ್ ಸೋಮವಾರ ತನ್ನ ಆರು ಅಭ್ಯರ್ಥಿಗಳ ಪಟ್ಟಿಯನ್ನು ಬಿಡುಗಡೆಗೊಳಿಸಿದ್ದು, ಈಶಾನ್ಯ ದಿಲ್ಲಿ ಲೋಕಸಭಾ ಕ್ಷೇತ್ರದಿಂದ ಹಿರಿಯ ನಾಯಕಿ ಶೀಲಾ ದೀಕ್ಷಿತ್ ಅವರನ್ನು ಕಣಕ್ಕಿಳಿಸಿದೆ. ಶೀಲಾ ದೀಕ್ಷಿತ್ ಬಿಜೆಪಿ ಅಭ್ಯರ್ಥಿ ಮನೋಜ್ ತಿವಾರಿ ಮತ್ತು ಆಮ್ ಆದ್ಮಿ ಪಕ್ಷದ ದಿಲೀಪ್ ಪಾಂಡೆ ವಿರುದ್ಧ ಕಣಕ್ಕಿಳಿಯಲಿದ್ದಾರೆ. ಮತ್ತೊಂದೆಡೆ ಅಜಯ್ ಮಾಕನ್ ದಿಲ್ಲಿ ಲೋಕಸಭಾ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿ ಸ್ಪರ್ಧಿಸುತ್ತಿದ್ದಾರೆ. ಅವರು ಆಪ್‌ನ ಬ್ರಿಜೇಶ್ ಗೋಯಲ್ ಅವರನ್ನು ಎದುರಿಸಲಿದ್ದಾರೆ. ಮಾಕೆನ್ ಕಳೆದ ಲೋಕಸಭೆ ಚುನಾವಣೆಯಲ್ಲೂ ಸ್ಪರ್ಧಿಸಿದ್ದರು. ಆದರೆ ಶೀಲಾ ದೀಕ್ಷಿತ್ ಕಳೆದ ಬಾರಿ ಚುನಾವಣೆ ಸಂದರ್ಭದಲ್ಲಿ ಕೇರಳದ ರಾಜ್ಯಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದರು. ಕಾಂಗ್ರೆಸ್ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಹೆಸರು ಇಂತಿವೆ, ಜೆಪಿ ಅಗರ್‌ವಾಲ್(ಚಾಂದಿನಿ ಚೌಕ್), ಅರವಿಂದರ್ ಸಿಂಗ್ ಲವ್ಲಿ(ಪೂರ್ವ ದಿಲ್ಲಿ), ರಾಜೇಶ್ ಲಿಲೋಥಿಯಾ(ವಾಯುವ್ಯ ದಿಲ್ಲಿ), ಮಹಾಬಲ್ ಮಿಶ್ರಾ(ಪೂರ್ವ ದಿಲ್ಲಿ). ದಕ್ಷಿಣ ದಿಲ್ಲಿ ಕ್ಷೇತ್ರದಿಂದ ಯಾವ ಅಭ್ಯರ್ಥಿಯನ್ನು ಕಣಕ್ಕಿಳಿಸುತ್ತಿವೆ ಎಂಬ ಬಗ್ಗೆ ಪಕ್ಷ ಮಾಹಿತಿ ನೀಡಿಲ್ಲ.

### ಸಾಧ್ವಿ ನಾಮಪತ್ರ ಸಲ್ಲಿಕೆ

**ಹೊಸದಿಲ್ಲಿ:** ಭೋಪಾಲ್ ಲೋಕಸಭಾ ಕ್ಷೇತ್ರದ ಬಿಜೆಪಿ ಅಭ್ಯರ್ಥಿ ಸಾಧ್ವಿ ಪ್ರಜ್ಞಾ ಸಿಂಗ್ ಠಾಕೂರ್ ಸೋಮವಾರ ನಾಮಪತ್ರ ಸಲ್ಲಿಸಿದರು. ಈ ಹಿಂದೆ ಪ್ರಜ್ಞಾ ಠಾಕೂರ್ ಅವರು ಮಂಗಳವಾರ ನಾಮಪತ್ರ ಸಲ್ಲಿಸುವುದಾಗಿ ತಿಳಿಸಿದ್ದರು. ತಮ್ಮ ನಿರ್ಧಾರ ಬದಲಿಸಿದ ಅವರು ಸೋಮವಾರ ಮಧ್ಯಪ್ರದೇಶದ ರಾಜಧಾನಿಯಲ್ಲಿರುವ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ನಾಮಪತ್ರ ಸಲ್ಲಿಸಿದರು. ಈ ವೇಳೆ ಪುರೋಹಿತರು ಮಂತ್ರಗಳನ್ನು ಪಠಿಸಿದರು. ಉತ್ತಮ ಮುಹೂರ್ತವಿದ್ದುದರಿಂದ ನಾಮಪತ್ರ ಸಲ್ಲಿಸುತ್ತಿರುವುದಾಗಿ ತಿಳಿಸಿದ ಠಾಕೂರ್, ಮಂಗಳವಾರ ಮತ್ತೊಂದು ನಾಮಪತ್ರ ಸಲ್ಲಿಸುವುದಾಗಿ ಹೇಳಿದರು.

# ಮೃತ ಭಯೋತ್ಪಾದಕರ ಪರ ಸೋನಿಯಾ ಗಾಂಧಿ ಕಾಳಜಿಗೆ ಅಮಿತ್ ಶಾ ಖಂಡನೆ

**ಕೋಲ್ಕತಾ:** ಕಾಂಗ್ರೆಸ್ ಭಯೋತ್ಪಾದನೆ ಕುರಿತಂತೆ ದ್ವಂದ್ವ ನಿಲುವು ಹೊಂದಿದೆ ಎಂದು ಬಿಜೆಪಿ ಅಧ್ಯಕ್ಷ ಅಮಿತ್ ಶಾ ಅವರು ಸೋಮವಾರ ಕಾಂಗ್ರೆಸ್‌ನ್ನು ತರಾಟೆಗೆತ್ತಿಕೊಂಡರು.

2008ರ ಬಾಟ್ಲಾ ಹೌಸ್ ಭಯೋತ್ಪಾದಕರ ಜೊತೆಗಿನ ಮುಖಾಮುಖಿಯಲ್ಲಿ ಬಲಿಯಾದ ಉಗ್ರರ ಬಗ್ಗೆ ಕಣ್ಣೀರು ಹಾಕಿದ ಯುಪಿಎ ಅಧ್ಯಕ್ಷೆ ಸೋನಿಯಾ ಗಾಂಧಿ , ಅನಂತರ ಅದೇ ಮುಖಾಮುಖಿಯಲ್ಲಿ ಹುತಾತ್ಮರಾದ ಪೊಲೀಸರ ಬಗ್ಗೆ ಏಕೆ ಕಣ್ಣೀರು ಹಾಕಿಲ್ಲ ಎಂಬುದಕ್ಕೆ ಕಾಂಗ್ರೆಸ್ ಈಗ ಉತ್ತರಿಸಬೇಕಾಗಿದೆ ಎಂದಿದ್ದಾರೆ .

2008ರ ಸೆ.13ರ ದಕ್ಷಿಣ ದಿಲ್ಲಿಯ ಸರಣಿ ಬಾಂಬ್ ಸ್ಫೋಟಗಳಲ್ಲಿ ಶಾಮೀಲಾದ ಉಗ್ರರು 6ದಿನಗಳ ಬಳಿಕ ಬಾಟ್ಲಾ ಹೌಸ್‌ನಲ್ಲಿರುವ ಬಗ್ಗೆ ಮಾಹಿತಿ ಪಡೆದ ಪೊಲೀಸರು ಅಲ್ಲಿ ಕಾರ್ಯಾಚರಣೆ ನಡೆಸಿದಾಗ ಇಬ್ಬರು ಭಯೋತ್ಪಾದಕರು ಹತರಾಗಿದ್ದು, ದಕ್ಷ ಪೊಲೀಸ್ ಅಧಿಕಾರಿ ಮಹೇಶ್ ಚಂದ್ ಶರ್ಮ ಹುತಾತ್ಮರಾಗಿದ್ದರು.

ಸಾಧ್ವಿ ವಿರುದ್ಧ ಮಾಡಲಾದ ಆರೋಪಗಳೆಲ್ಲವೂ ಸುಳ್ಳಾಗಿದ್ದು, ಯಾವುದೇ ಆಧಾರವಿಲ್ಲದೆ ಬಂಧಿತರಾಗಿದ್ದ ಸಾಧ್ವಿ ಜಾಮೀನು ಮೇಲೆ ಬಿಡುಗಡೆಯಾಗಿದ್ದಾರೆ.ಅವರನ್ನು ನಾವು ಭೋಪಾಲ್‌ನಿಂದ ಕಣಕ್ಕಿಳಿಸಿದ್ದೇವೆ. ಬಾಟ್ಲಾಹೌಸ್ ಭಯೋತ್ಪಾದಕ ಮುಖಾಮುಖಿಯಲ್ಲಿ ಹುತಾತ್ಮರಾದ ದಕ್ಷ ಪೊಲೀಸ್ ಅಧಿಕಾರಿ ಮುಕೇಶ್ ಚಂದ್ ಶರ್ಮ ಅವರ ಸಾವನ್ನು ವಿವಾದಕ್ಕೀಡು ಮಾಡಿ ಹಿಂದು ಉಗ್ರವಾದ ಸೃಷ್ಟಿಸಿದ ಕಾಂಗ್ರೆಸ್ ನಾಯಕರಲ್ಲೊಬ್ಬರಾದ ದಿಗ್ವಿಜಯ್ ಸಿಂಗ್ ಇಲ್ಲಿ ಕಾಂಗ್ರೆಸ್ ಅಭ್ಯರ್ಥಿ. ಮಾಲೇಗಾಂವ್ ಸ್ಫೋಟದ ನಿಜವಾದ ಅಪರಾಧಿಗಳು ಕಾನೂನಿನ ಕುಣಿಕೆಯಿಂದ ತಪ್ಪಿಸಿಕೊಂಡಿದ್ದಾರೆ ಎಂದು ಶಾ ಇಲ್ಲಿ ನಡೆದ ಪತ್ರಿಕಾಗೋಷ್ಠಿಯಲ್ಲಿ ನುಡಿದರು.

ಇದು ಸಂಪೂರ್ಣ ಸರಿಯಾದ ನಿರ್ಧಾರ. ಅವರ ವಿರುದ್ಧದ ಆರೋಪಗಳು ನಿರಾಧಾರ. ಸಾಧ್ವಿ ಅಥವಾ ಸ್ವಾಮಿ ಅಸೀಮಾನಂದರ ವಿರುದ್ಧದ ಯಾವ ಆರೋಪಗಳೂ ಸಾಬೀತಾಗಿಲ್ಲ . ಆದರೆ ನೈಜ ಅಪರಾಧಿಗಳನ್ನು ಬಂಧಿಸಿದ ಕೂಡಲೇ ಅಂದಿನ ಯುಪಿಎ ಸರಕಾರದಡಿ ಅವರನ್ನು ಬಿಡುಗಡೆಗೊಳಿಸಲಾಗಿತ್ತು. ಅವರನ್ನು ಯಾಕಾಗಿ ಬಿಡುಗಡೆಗೊಳಿಸಲಾಯಿತು ಎಂಬುದಕ್ಕೆ ಕಾಂಗ್ರೆಸ್ ಉತ್ತರ ನೀಡಬೇಕಾಗಿದೆ ಎಂದು ಅಮಿತ್ ಶಾ ಹೇಳಿದರು.ಮಾಲೇಗಾಂವ್ ಸ್ಫೋಟದಲ್ಲಿ ಲಷ್ಕರ್ ತೊಯ್ಬಾ ಉಗ್ರರ ಕೈವಾಡವಿದ್ದ ಬಗ್ಗೆ ಅಮೆರಿಕನ್ ಗುಪ್ತಚರ ಏಜನ್ಸಿಗಳು ಕೂಡಾ ದೃಢಪಡಿಸಿದ್ದವು ಎಂಬುದರತ್ತ ಶಾ ಗಮನ ಸೆಳೆದರು.



### ಸಾಧ್ವಿ ಸ್ಪರ್ಧೆಗೆ ಸಮರ್ಥನೆ

ಲೋಕಸಭಾ ಅಭ್ಯರ್ಥಿಯಾಗಿ ಸಾಧ್ವಿ ಪ್ರಜ್ಞಾ ಸಿಂಗ್ ಅವರನ್ನು ಕಣಕ್ಕಿಳಿಸಿದ ಪಕ್ಷದ ನಿರ್ಧಾರವನ್ನು ಬಿಜೆಪಿ ರಾಷ್ಟ್ರೀಯ ಅಧ್ಯಕ್ಷ ಅಮಿತ್ ಶಾ ಬಲವಾಗಿ ಸಮರ್ಥಿಸಿಕೊಂಡಿದ್ದಾರೆ.

**ನಿರಾಶ್ರಿತರಿಗೆ ಅಭಯ, ಅಕ್ರಮ ವಲಸಿಗರ ವಿರುದ್ಧ ಬಿಗಿ ಕ್ರಮ:** ರಾಷ್ಟ್ರೀಯ ನಾಗರಿಕ ನೋಂದಣಿ (ಎನ್‌ಆರ್‌ಸಿ) ಮತ್ತು ಪೌರತ್ವ (ತಿದ್ದುಪಡಿ) ವಿಧೇಯಕ ಕುರಿತು ಪ್ರಸ್ತಾಪಿಸುತ್ತ, ವಲಸಿಗರು ಆತಂಕ ಪಡಬೇಕಾಗಿಲ್ಲ. ಬಿಜೆಪಿ ಮರಳಿ ಅಧಿಕಾರಕ್ಕೆ ಬಂದ ಬಳಿಕ ಮೊದಲು ಸಂಸತ್ತಿನಲ್ಲಿ ವಿಧೇಯಕ ಮಂಡಿಸಿ ಅಂಗೀಕಾರ ಪಡೆಯುತ್ತದೆ. ಅನಂತರ ಇದರಡಿ ಎಲ್ಲ ನಿರಾಶ್ರಿತರು(ಹಿಂದು, ಸಿಖ್, ಬೌದ್ಧ, ಕ್ರೈಸ್ತ ನಿರಾಶ್ರಿತರು). ನೈಜ ಭಾರತೀಯ ಪೌರರಿಗೆ ಯಾವುದೇ ತೊಂದರೆಯಾಗದಂತೆ ಪೂರ್ಣಗೌರವದೊಂದಿಗೆ ಪೌರತ್ವ ನೀಡಲಾಗುತ್ತದೆ. ಆದರೆ ಅಕ್ರಮ ವಲಸಿಗರನ್ನು ಹೊರಹಾಕಲು ಅದನ್ನು ದೇಶಾದ್ಯಂತ ಜಾರಿಗೊಳಿಸಲಾಗುತ್ತದೆ ಎಂದು ಒತ್ತಿ ಹೇಳಿದರು.ಈ ಬಗ್ಗೆ ಪ.ಬಂ.ಸಿಎಂ ಮಮತಾ ಬ್ಯಾನರ್ಜಿ ದಾರಿತಪ್ಪಿಸುವ ಹೇಳಿಕೆ ನೀಡುತ್ತಿದ್ದು ಇದಕ್ಕೆ ಯಾರೂ ಕಿವಿಗೊಡಬೇಕಾಗಿಲ್ಲ ಎಂದರು.

ಪೌರತ್ವ ವಿಧೇಯಕವನ್ನು ಜ.8ರಂದು ಲೋಕಸಭೆ ಅಂಗೀಕರಿಸಿತ್ತು. ಆದರೆ ರಾಜ್ಯಸಭೆಯಲ್ಲಿ ಬಿಜೆಪಿಗೆ ಬಹುಮತವಿಲ್ಲದ್ದರಿಂದ ಮಂಡಿಸಲಿಲ್ಲ.2020ರ ಹೊತ್ತಿಗೆ ರಾಜ್ಯಸಭೆಯಲ್ಲೂ ಬಿಜೆಪಿಗೆ ಬಹುಮತ ದೊರೆಯಲಿದೆ. ಆಗ ವಿಧೇಯಕ ಅಂಗೀಕರಿಸಲು ಯಾವುದೇ ಸಮಸ್ಯೆ ಇರದು ಎಂದು ಅಮಿತ್ ಶಾ ತಿಳಿಸಿದರು.

ಕಾಂಗ್ರೆಸ್ ಅಧ್ಯಕ್ಷ ರಾಹುಲ್ ಗಾಂಧಿ ಅಮೇಥಿಯಲ್ಲಿ ನಾಮಪತ್ರ ಸಲ್ಲಿಕೆ ವೇಳೆ ಸಲ್ಲಿಸಿದ ಅಫಿಡವಿಟ್‌ನಲ್ಲಿ ಶೈಕ್ಷಣಿಕ ಅರ್ಹತೆ ಮತ್ತು ಪೌರತ್ವ ಕುರಿತು ನೀಡಿದ ತಪ್ಪು ಮಾಹಿತಿಗಳ ಬಗ್ಗೆ ಚುನಾವಣಾಧಿಕಾರಿ ಗಮನ ಹರಿಸಬೇಕು ಎಂದು ಅಮಿತ್ ಶಾ ಒತ್ತಾಯಿಸಿದರು.

**ಸೋಲಿನ ಭೀತಿ ಮಮತಾ ಟೀಕೆಗೆ ಕಾರಣ:** ರಾಜ್ಯದಲ್ಲಿ ಬಿಜೆಪಿ ಮತ್ತು ಚುನಾವಣಾ ಆಯೋಗದ ವಿರುದ್ಧ ಮಮತಾ ಬ್ಯಾನರ್ಜಿ ಮಾಡುತ್ತಿರುವ ಆರೋಪಗಳ ಬಗ್ಗೆ ಕೇಳಿದಾಗ, ಇದು ಮಮತಾ ಅವರ ಸೋಲಿನ ಆತಂಕದಿಂದ ಉದ್ಭವಾಗಿರುವಂಥದ್ದು. 2011ರಲ್ಲಿ ಎಡರಂಗದ ವಿರುದ್ಧ ಆಕೆ ಹೋರಾಡುತ್ತಿದ್ದಾಗ ಅನೇಕ ಪೊಲೀಸ್ ಅಧಿಕಾರಿಗಳನ್ನು ಬದಲಿಸಲಾಗಿತ್ತು. ಅನೇಕ ವಿಶೇಷ ವೀಕ್ಷಕರನ್ನು ಕೂಡಾ ನೇಮಿಸಲಾಗಿತ್ತು. ಆಗೆಲ್ಲ ಮಮತಾ ಯಾಕೆ ದೂರಿಲಿಲ್ಲ ? ಈಗ ಚುನಾವಣಾ ಆಯೋಗ ಅದನ್ನೇ ಮಾಡುತ್ತಿದೆ.ಮಮತಾ ಅವರ ಗೂಂಡಾಗಳಿಗೆ ಆತಂಕ ಎದುರಾಗಿರುವುದೇ ಮಮತಾ ಅವರ ದೂರಿಗೆ ಕಾರಣ ಎಂದರು.

ಚುನಾವಣಾ ಹಗರಣದಲ್ಲಿ ಹೆಸರು ಕೇಳಿಬಂದ ಕೆಲವು ಟಿಎಂಸಿ ನಾಯಕರು ಬಿಜೆಪಿ ಸೇರಿದ್ದಾರಲ್ಲ ಎಂದು ಕೇಳಿದಾಗ , ಬಿಜೆಪಿ ಇವರೆಲ್ಲರ ಹಿನ್ನೆಲೆಯನ್ನು ಸರಿಯಾಗಿ ಪರಿಶೀಲಿಸಿಯೇ ಸೇರಿಸಿಕೊಂಡಿದೆ. ತನಿಖೆ ಪೂರ್ಣಗೊಂಡಾಗ ನೀವು ಈ ಕುರಿತ ಎಲ್ಲ ಸತ್ಯಗಳನ್ನು ತಿಳಿಯಲಿದ್ದೀರಿ ಎಂದರು ಶಾ.

ಬಹುಮತಕ್ಕೆ ಕೊರತೆಯಾದಲ್ಲಿ ಬಿಜೆಪಿ ತೃಣಮೂಲ ಕಾಂಗ್ರೆಸ್ ಬೆಂಬಲ ಕೋರುವುದೆ ಎಂದು ಕೇಳಿದಾಗ ,ಅಂತಹ ಸಂದರ್ಭವೇ ಬರುವುದಿಲ್ಲ, ನಾವು ಸಂಪೂರ್ಣ ಬಹುಮತ ಪಡೆಯುತ್ತೇವೆ ಎಂದು ಶಾ ಉತ್ತರಿಸಿದರು.

ಪಶ್ಚಿಮ ಬಂಗಾಳದಲ್ಲಿ ಪ್ರಜಾಪ್ರಭುತ್ವದ ಅಸ್ತಿತ್ವಕ್ಕೇ ಬೆದರಿಕೆ ಎದುರಾಗಿದೆ. ರಾಜ್ಯದ ಜನತೆ ಈ ಚುನಾವಣೆಯಲ್ಲಿ ತೃಣಮೂಲ ಕಾಂಗ್ರೆಸ್ ಅನ್ನು ಸೋಲಿಸಲಿದ್ದಾರೆ ಎಂದ ಶಾ, 42ಲೋಕಸಭಾ ಕ್ಷೇತ್ರಗಳ ಪೈಕಿ ಬಿಜೆಪಿ ಕನಿಷ್ಠ 23ರಲ್ಲಿ ಗೆಲುವು ಸಾಧಿಸುವುದು ನಮ್ಮ ಗುರಿಯಾಗಿದೆ ಎಂದರು.

### ವಯಸ್ಸಾಗಿದೆ ಎಂದವರಿಗೆ ಬ್ಯಾಟ್ ಮೂಲಕವೇ ತಿರುಗೇಟು ನೀಡಿದ ಮಿಸ್ಟರ್ ಫಿನಿಷರ್

# ಧೋನಿ ನಿಂಗ್ ವಯಸ್ಸಾಗಿಲ್ವೋ...!

**ಬೆಂಗಳೂರು:** ಭಾರತ ಕ್ರಿಕೆಟ್ ಕಂಡ ಅತ್ಯುತ್ತಮ ಫಿನಿಷರ್ ಮಹೇಂದ್ರ ಸಿಂಗ್ ಧೋನಿ. ಮಾಜಿ ನಾಯಕ ಧೋನಿಗೆ ವಯಸ್ಸಾಯ್ತು, ಅವರಿನ್ನು ಕ್ರಿಕೆಟ್‌ನಿಂದ ನಿವೃತ್ತಿ ಆಗಲಿ ಎಂದು ಹೇಳುವವರು ಅನೇಕ. ನಿಧಾನವಾಗಿ ಆಡುತ್ತಾರೆ ಎನ್ನುವ ಆರೋಪಗಳನ್ನು ಮಾಡಿದವರೂ ಬಹಳಷ್ಟು ಜನ. ಆದರೆ ಇವರೆಲ್ಲರ ಟೀಕೆಗೆ ಧೋನಿ ಪ್ರತಿ ಸಾರಿಯೂ ತಮ್ಮ ಬ್ಯಾಟ್ ಮೂಲಕವೇ ಉತ್ತರ ನೀಡುತ್ತಿದ್ದಾರೆ.

ಧೋನಿ ನಿಂಗೆ ವಯಸ್ಸಾಗಿಲ್ವೋ ಅಂದವರಿಗೆಲ್ಲ ಪ್ರತಿ ಪಂದ್ಯದಲ್ಲಿಯೂ ಉತ್ತರ ನೀಡುತ್ತಿರುವ ಧೋನಿ ಬೆಂಗಳೂರಿನಲ್ಲಿ ಭಾನುವಾರ ನಡೆದ ಪಂದ್ಯದಲ್ಲಂತೂ ಘರ್ಜನೆಯನ್ನೇ ಮಾಡಿದರು. ಮೂರು ಓವರ್‌ಗಳಲ್ಲಿ ಅಂದಾಜು 50 ರನ್ ಬಾರಿಸಬೇಕು. ಚೆನ್ನೈ ಇದನ್ನು ಗಳಿಸಲಾರದು ಬಿಡಿ ಎಂದುಕೊಂಡವರೇ ಅನೇಕ. ಆದರೆ ನೋಡ ನೋಡುತ್ತಿದ್ದಂತೆಯೇ ಸಿಕ್ಸರ್, ಬೌಂಡರಿಗಳನ್ನು ಸಿಡಿಸಿ ರಾಯಲ್ ಚಾಲೆಂಜರ್ಸ್ ಬೆಂಗಳೂರು ತಂಡದ ಆಟಗಾರರನ್ನು ಹಾಗೂ ಅಭಿಮಾನಿ ಬಳಗವನ್ನು ದಂಗುಬಡಿಸಿದವರು ಧೋನಿ.

ಪ್ರಸ್ತುತ ಕ್ರಿಕೆಟ್‌ನಲ್ಲಿ ಅತ್ಯುತ್ತಮ ಫಿನಿಷರ್ ಎಂದೇ ಜನಜನಿತರಾಗಿರುವ ಧೋನಿ ಭಾರತದ ಪಾಲಿಗೆ ಅದೆಷ್ಟೋ ಪಂದ್ಯಗಳನ್ನು ಗೆಲ್ಲಿಸಿಕೊಟ್ಟಿದ್ದಾರೆ. 36 ವರ್ಷವಾದರೂ ಕಿರಿಯ ಆಟಗಾರರು ನಾಚುವಂತೆ ಬ್ಯಾಟಿಂಗ್ ಮಾಡುತ್ತಾರೆ. ರನ್ ಕದಿಯುತ್ತಾರೆ. ಧೋನಿ ಜತೆಗೆ ಬ್ಯಾಟ್ ಮಾಡುವ ರಾಯುಡು, ಕೇದಾರ್ ಜಾಧವ್, ಬ್ರಾವೋ ಮುಂತಾದವರೆಲ್ಲ ರನ್ ಕದಿಯಲಾರದೇ ಒದ್ದಾಡುತ್ತಾರೆ. ಆದರೆ ಧೋನಿ ಮಾತ್ರ ರನ್ ಗಳಿಸುವುದರಲ್ಲಿ ಎತ್ತಿದ ಕೈ.

ಚೆನ್ನೈ ತಂಡ ಹಿರಿಯರ ತಂಡ. ಇದರಲ್ಲಿ ನಿವೃತ್ತ ಆಟಗಾರರೇ ತುಂಬಿದ್ದಾರೆ ಎನ್ನುವ ಮಾತುಗಳು ಸಾಮಾಜಿಕ ಜಾಲತಾಣಗಳಲ್ಲಿ ಆಗಾಗ ಕೇಳಿ ಬರುತ್ತಲೇ ಇವೆ. ಆದರೆ ಈ ಆಟಗಾರರನ್ನು ಇಟ್ಟುಕೊಂಡು ಗೆಲುವಿನ ಮೇಲೆ ಗೆಲುವನ್ನು ಪಡೆಯುತ್ತಿರುವುದು ಧೋನಿಯ ಬುದ್ಧಿವಂತಿಕೆಗೆ ಹಿಡಿದ ಕೈಗನ್ನಡಿ. ಧೋನಿ ಯಾವ ಆಟಗಾರರನ್ನು ಹೇಗೆ ಬಳಸಿಕೊಳ್ಳಬೇಕು ಎನ್ನುವುದನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾರೆ. ಆಟಗಾರರನ್ನು ಸದ್ಬಳಕೆ ಮಾಡಿಕೊಳ್ಳುತ್ತಾರೆ. ಬ್ಯಾಕಪ್ ಆಟಗಾರರನ್ನು ಇಟ್ಟುಕೊಳ್ಳದೆಯೂ ಗೆದ್ದು ತೋರಿಸುತ್ತಿರುವುದು ಧೋನಿಯ ಬುದ್ಧಿವಂತಿಕೆ.

ಇದೀಗ ಧೋನಿ ಅಭಿಮಾನಿಗಳು ಧೋನಿಗೆ ವಯಸ್ಸಾಗಿದೆ ಎನ್ನುವ ಮಾತಿನ ಬದಲು ಧೋನಿ ನಿಂಗೆ ವಯಸ್ಸಾಗಿಲ್ವೋ ಎನ್ನಲಾರಂಭಿಸಿದ್ದಾರೆ.

200 ಸಿಕ್ಸರ್

### ಐಪಿಎಲ್‌ನಲ್ಲಿ ಧೋನಿ ಸಿಕ್ಸರ್‌ಗಳ ದ್ವಿಶತಕ

ಬೆಂಗಳೂರು: ಅನುಭವಿ ವಿಕೆಟ್ ಕೀಪರ್ ಮಹೇಂದ್ರ ಸಿಂಗ್ ಧೋನಿ, ರಾಯಲ್ ಚಾಲೆಂಜರ್ಸ್ ಬೆಂಗಳೂರು ತಂಡದ ವಿರುದ್ಧ ಚೆನ್ನೈ ಸೂಪರ್ ಕಿಂಗ್ಸ್‌ಗೆ ಜಯದ ಮಾಲೆ ತೊಡಿಸುವಲ್ಲಿ ವಿಫಲರಾಗಿರಬಹುದು, ಆದರೆ ಈ ಪಂದ್ಯದಲ್ಲಿ ಅವರು ವಿಶಿಷ್ಟ ದಾಖಲೆಯೊಂದನ್ನು ಬರೆದಿದ್ದಾರೆ. ಇಂಡಿಯನ್ ಪ್ರೀಮಿಯರ್ ಲೀಗ್‌ನಲ್ಲಿ 200 ಸಿಕ್ಸರ್ ಬಾರಿಸಿದ ಮೊದಲ ಭಾರತೀಯ ಆಟಗಾರ ಎಂಬ ಹೆಗ್ಗಳಿಕೆಗೆ ಧೋನಿ ಪಾತ್ರರಾಗಿದ್ದಾರೆ.

ಚೆನ್ನೈ ಬೆಂಗಳೂರು ವಿರುದ್ಧ ವೀರೋಚಿತ ಸೋಲು ಕಂಡಿತು. ಈ ಪಂದ್ಯದಲ್ಲಿ ಮಹೇಂದ್ರ ಸಿಂಗ್ ಧೋನಿ ಏಕಾಂಗಿ ಹೋರಾಟ ನಡೆಸಿ ಎಲ್ಲರ ಗಮನ ಸೆಳೆದರು. 48 ಎಸೆತಗಳಲ್ಲಿ ಮಾಹಿ 7 ಸಿಕ್ಸರ್ ಸೇರಿದಂತೆ 84 ರನ್ ಸಿಡಿಸಿದರು.

ಐಪಿಎಲ್ ಕ್ರಿಕೆಟ್ ಇತಿಹಾಸದಲ್ಲಿ 200 ಸಿಕ್ಸರ್ ಬಾರಿಸಿದ ಮೊದಲ ಭಾರತೀಯ ಆಟಗಾರ ಎಂಬ ಹೆಗ್ಗಳಿಕೆಗೆ ಧೋನಿ ಪಾತ್ರರಾಗಿದ್ದಾರೆ. ಒಟ್ಟಾರೆಯಾಗಿ ಟೂರ್ನಿಯಲ್ಲಿ ಈ ಸಾಧನೆ ಮಾಡಿದ ಮೂರನೇ ಆಟಗಾರ ಎಂಬ ಹೆಗ್ಗಳಿಕೆ ಇವರದ್ದಾಗಿದೆ. ಈ ಪಟ್ಟಿಯಲ್ಲಿ ಮೊದಲು ಕಾಣಿಸಿಕೊಳ್ಳುವ ಆಟಗಾರ ಜಮೈಕಾದ ಕ್ರಿಸ್ ಗೇಲ್. ದೈತ್ಯ ಬ್ಯಾಟ್ಸ್‌ಮನ್ ಒಟ್ಟು 323 ಸಿಕ್ಸರ್ ಬಾರಿಸಿ ಮೊದಲ ಸ್ಥಾನದಲ್ಲಿದ್ದಾರೆ. ರಾಯಲ್ ಚಾಲೆಂಜರ್ಸ್ ತಂಡದ ಬ್ಯಾಟ್ಸ್‌ಮನ್ ಮಿಸ್ಟರ್ 360 ಖ್ಯಾತಿಯ ಎಬಿ ಡಿವಿಲಿಯರ್ಸ್ 204 ಸಿಕ್ಸರ್ ಬಾರಿಸಿ ಈ ಪಟ್ಟಿಯಲ್ಲಿ ಎರಡನೇ ಸ್ಥಾನ ಪಡೆದಿದ್ದಾರೆ. ಆರ್‌ಸಿಬಿ ವಿರುದ್ಧದ ಪಂದ್ಯದಲ್ಲಿ 7 ಸಿಕ್ಸರ್ ಬಾರಿಸಿರುವ ಮಾಹಿ, ಒಟ್ಟು 203 ಸಿಕ್ಸರ್‌ಗಳನ್ನು ಸಿಡಿಸಿ ಬೀಗಿದ್ದಾರೆ. ಚುಟುಕು ಲೀಗ್‌ನಲ್ಲಿ ಸಿಕ್ಸರ್ ಬಾರಿಸುವುದರಲ್ಲಿ ಚೆನ್ನೈ ನಾಯಕ ಭಾರತೀಯ ಆಟಗಾರರಿಗಿಂತ ಮುಂದಿದ್ದಾರೆ. ಇವರ ನಂತರ ರೋಹಿತ್ ಶರ್ಮಾ (190), ಸುರೇಶ್ ರೈನಾ (190), ಆರ್‌ಸಿಬಿ ತಂಡದ ನಾಯಕ ವಿರಾಟ್ ಕೊಹ್ಲಿ (186) ಇದ್ದಾರೆ.

### ಧೋನಿ ಬ್ಯಾಟಿಂಗ್ ನಮಗೆಲ್ಲಾ ಭಯ ಹುಟ್ಟಿಸಿತು

ಧೋನಿ ಬ್ಯಾಟಿಂಗ್ ನಮಗೆಲ್ಲಾ ಭಯ ಹುಟ್ಟಿಸಿತ್ತು ಎಂದು ಆರ್‌ಸಿಬಿ ನಾಯಕ ತಿಳಿಸಿದ್ದಾರೆ. ನಾವು 19ನೇ ಓವರ್‌ವರೆಗೂ ಉತ್ತಮ ಬೌಲಿಂಗ್ ನಡೆಸಿದ್ದೆವು. ಈ ಪಿಚ್‌ನಲ್ಲಿ 160 ರನ್ ಸಮರ್ಥಿಸಿಕೊಳ್ಳುವುದು ಉತ್ತಮ ಕೆಲಸ. ಈ ಪಂದ್ಯ ಗೆದ್ದಿರುವುದು ಖುಷಿ ನೀಡಿದೆ. ಇದಕ್ಕೂ ಮೊದಲು ಎರಡು ಪಂದ್ಯಗಳನ್ನು ನಾವು ಕಡಿಮೆ ರನ್ ಗಳಿಂದ ಸೋತಿದ್ದೇವೆ ಎಂದು ತಿಳಿಸಿದ್ದಾರೆ.
ಧೋನಿ ತಮ್ಮ ಭರ್ಜರಿ ಬ್ಯಾಟಿಂಗ್‌ನಿಂದ, ನನ್ನನ್ನು ಹಾಗೂ ನನ್ನ ತಂಡವನ್ನು ಸೋಲಿಸಿದರು. ಮಾಹಿ ಅವರು ಯಾವುದಕ್ಕೆ ಖ್ಯಾತರೋ, ಅಂತಹ ಆಟ ಆಡಿದ್ದಾರೆ. ಅವರು ತಮ್ಮ ಧಮಾಕೇದಾರ್ ಪ್ರದರ್ಶನದಿಂದ ನಮ್ಮೆಲ್ಲರಲ್ಲಿ ಭಯ ಹುಟ್ಟಿಸಿದ್ದರು ಎಂದು ವಿರಾಟ್ ಹಾಡಿ ಹೊಗಳಿದ್ದಾರೆ.

### ಧೋನಿ ಕ್ರೀಸ್‌ನಲ್ಲಿ ಇರುವವರೆಗೂ ಪಂದ್ಯ ಮುಗಿಯಲ್ಲ

ಮಹೇಂದ್ರ ಸಿಂಗ್ ಧೋನಿ ಕ್ರೀಸ್‌ನಲ್ಲಿ ಇರುವವರೆಗೂ ಪಂದ್ಯ ಮುಗಿಯುವುದಿಲ್ಲ ಎಂದು ರಾಯಲ್ ಚಾಲೆಂಜರ್ಸ್ ತಂಡದ ವಿಕೆಟ್ ಕೀಪರ್ ಬ್ಯಾಟ್ಸ್‌ಮನ್ ಪಾರ್ಥಿವ್ ಪಟೇಲ್ ಹೇಳಿದ್ದಾರೆ.

ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ಎಂಥ ಕ್ಲಿಷ್ಟ ಸಂದರ್ಭವಿದ್ದರೂ ಧೋನಿ ಕ್ರೀಸ್‌ನಲ್ಲಿದ್ದರೆ ಪಂದ್ಯ ಸುಲಭವಾಗಿ ಮುಗಿಯುವುದಿಲ್ಲ ಎಂದರು.. ಭಾನುವಾರದ ಪಂದ್ಯದಲ್ಲಿ ಧೋನಿ ಕೊನೆಯ ಎಸೆತವನ್ನು ಹೊಡೆಯುವಲ್ಲಿ ವಿಫಲರಾಗುತ್ತಾರೆಂದು ಭಾವಿಸಿರಲಿಲ್ಲ. ಕೊನೆಯ ಎಸೆತವನ್ನು ಅವರಿಗೆ ಆಫ್‌ಸ್ಟಂಪ್‌ನಲ್ಲಿ ಎಸೆಯಲು ಯೋಜನೆ ರೂಪಿಸಿದ್ದೆವು. ಅದರಂತೆ ಉಮೇಶ್ ಯಾದವ್ ಆಫ್‌ಸ್ಟಂಪ್ ಚೆಂಡನ್ನು ಎಸೆದಿದ್ದರು. ಆದರೆ, ಚೆಂಡನ್ನು ಹೊಡೆಯುವಲ್ಲಿ ಧೋನಿ ವಿಫಲರಾಗಿದ್ದರು. ಒಂದು ವೇಳೆ ಧೋನಿ ಎಡ ಭಾಗ ಚೆಂಡನ್ನು ಆಡಿದ್ದರೆ ಸುಲಭವಾಗಿ ಎರಡು ರನ್ ಗಳಿಸುವುದನ್ನು ತಡೆಯಲು ಸಾಧ್ಯವಾಗುತ್ತಿರಲಿಲ್ಲ ಎಂದರು. ಆಫ್ರಿಕಾ ಹಿರಿಯ ವೇಗಿ ಡೇಲ್ ಸ್ಟೇನ್ ಬಗ್ಗೆ ಮಾತನಾಡಿ, ಸ್ಟೇನ್ ಬೌಲಿಂಗ್ ಅದ್ಭುತವಾಗಿತ್ತು. ಸನ್‌ರೈಸರ್ಸ್ ಹೈದರಾಬಾದ್ ಪರ ಅವರು ಆಡುವಾಗ ಈ ರೀತಿಯ ಬೌಲಿಂಗ್ ನೋಡಿದ್ದೆ. ಅದೇ ರೀತಿ ಈ ಪಂದ್ಯದಲ್ಲಿ ಪರಿಣಾಮಕಾರಿಯಾಗಿ ಬೌಲಿಂಗ್ ಮಾಡಿದ್ದಾರೆ ಎಂದರು.

### IPL ಐಪಿಎಲ್ 12ನೇ ಆವೃತ್ತಿ ಅಂಕಪಟ್ಟಿ

| ತಂಡ | ಪಂದ್ಯ | ಜಯ | ಸೋಲು | ನೆ.ರ.ರೇ | ಅಂಕ |
|---|---|---|---|---|---|
| ಚೆನ್ನೈ | 10 | 7 | 3 | +0. 009 | 14 |
| ಮುಂಬೈ | 10 | 6 | 4 | +0. 357 | 12 |
| ಡೆಲ್ಲಿ | 10 | 6 | 4 | +0. 160 | 12 |
| ಸನ್‌ರೈಸರ್ಸ್ | 9 | 5 | 4 | +0. 737 | 10 |
| ಪಂಜಾಬ್ | 10 | 5 | 5 | −0. 044 | 10 |
| ಕೆಕೆಆರ್ | 10 | 4 | 6 | −0. 013 | 8 |
| ರಾಯಲ್ಸ್ | 9 | 3 | 6 | −0. 474 | 6 |
| ಆರ್‌ಸಿಬಿ | 10 | 3 | 7 | −0. 840 | 6 |

**ಆರೆಂಜ್ ಕ್ಯಾಪ್**
ಡೇವಿಡ್ ವಾರ್ನರ್
(ಪಂದ್ಯ-9, ರನ್-517)

**ಪರ್ಪಲ್ ಕ್ಯಾಪ್**
ಕಗಿಸೋ ರಬಾಡ
(ಪಂದ್ಯ -10, ವಿಕೆಟ್ -21)

ಅತಿಹೆಚ್ಚು ಸಿಕ್ಸರ್
ಆಂಡ್ರೆ ರಸೆಲ್ (41)

ಅತಿವೇಗದ ಎಸೆತ
ಕಗಿಸೋ ರಬಾಡ
153.91 ಕಿಮೀ / ಗಂಟೆ

**ಇಂದಿನ ಪಂದ್ಯ**
ಚೆನ್ನೈ V ಸನ್‌ರೈಸರ್ಸ್
ರಾತ್ರಿ 8ಕ್ಕೆ, ಚೆನ್ನೈ

## ವಿಶ್ವಕಪ್‌ಗೆ ಅಫ್ಘಾನಿಸ್ತಾನ ತಂಡ

**ಕಾಬೂಲ್:** ಮುಂಬರುವ ಐಸಿಸಿ ವಿಶ್ವಕಪ್‌ಗೆ 15 ಆಟಗಾರರ ಅಫ್ಘಾನಿಸ್ತಾನ ತಂಡವನ್ನು ಸೋಮವಾರ ಪ್ರಕಟಿಸಲಾಗಿದ್ದು, ಮಾಜಿ ನಾಯಕ ಅಸ್ಗರ್ ಅಫ್ಘಾನ್ ಹಾಗೂ ವೇಗಿ ಹಮಿದ್ ಹಸನ್ ತಂಡಕ್ಕೆ ಮರಳಿದ್ದಾರೆ.

**ತಂಡಕ್ಕೆ ಮರಳಿದ ಅಸ್ಗರ್ ಹಸನ್**

**ತಂಡ ಇಂತಿದೆ**
ಗುಲ್ಬದಿನ್ ನೈಬ್ (ನಾಯಕ), ಮೊಹಮ್ಮದ್ ಶಹಜಾದ್ (ವಿ.ಕೀ), ನೂರ್ ಅಲಿ ಝದ್ರಾನ್, ಹಜ್ರತುಲ್ಲಾ ಝಝೈ, ರಹಮತ್ ಶಾ, ಅಸ್ಗರ್ ಅಫ್ಘಾನ್, ಹಶ್ಮತುಲ್ಲಾ ಶಾಹಿದಿ, ನಾಜಿಬುಲ್ಲಾ ಝದ್ರಾನ್, ಸಮಿಉಲ್ಲಾ ಶೆನ್ವಾರಿ, ಮೊಹಮ್ಮದ್ ನಬಿ, ರಶೀದ್ ಖಾನ್, ದವ್ಲತ್ ಝದ್ರಾನ್, ಅಫ್ತಾಬ್ ಆಲಂ, ಹಮೀದ್ ಹಸನ್ ಹಾಗೂ ಮುಜೀಬ್ ಉರ್ ರಹಮಾನ್.

ಫಿಟ್ನೆಸ್ ಸಮಸ್ಯೆಯಿಂದ ಹಸನ್ ದೀರ್ಘಕಾಲ ರಾಷ್ಟ್ರೀಯ ತಂಡದಿಂದ ಹೊರಗುಳಿದಿದ್ದರು. ಇವರು 2017ರಲ್ಲಿ ಹಿರಿಯ ತಂಡದಲ್ಲಿ ಆಡಿದ್ದರು. ಹಸನ್ ಅದರ ಫಿಟ್ನೆಸ್ ಪರೀಕ್ಷೆ ಇನ್ನೂ ನಡೆದಿಲ್ಲ.

ಹಿರಿಯ ವೇಗಿ ಹಮಿದ್ ಹಸನ್ ತಂಡಕ್ಕೆ ಮರಳಿರುವುದು ಒಳ್ಳೆಯ ಬೆಳವಣಿಗೆ. ಮುಂದಿನ ಅಭ್ಯಾಸ ಪಂದ್ಯಗಳಲ್ಲಿ ಅವರನ್ನು ಆಡಿಸಲಾಗುವುದು ಎಂದು ಅಫ್ಘಾನಿಸ್ತಾನ ಮುಖ್ಯ ತರಬೇತುದಾರ ದೌಲತ್ ಖಾನ್ ತಿಳಿಸಿರುವುದಾಗಿ ಐಸಿಸಿ ವೆಬ್‌ಸೈಟ್ ಪ್ರಕಟಿಸಿದೆ.

ಕಳೆದ ತಿಂಗಳು ಅಫ್ಘಾನಿಸ್ತಾನ ತಂಡದ ನಾಯಕತ್ವದಿಂದ ಕೆಳಗಿಳಿದ ಅಸ್ಗರ್ ಅಫ್ಘಾನ್ ಅವರನ್ನು ಮತ್ತೆ ತಂಡಕ್ಕೆ ಪರಿಗಣಿಸಲಾಗಿದೆ. ತಂಡದ ನಾಯಕತ್ವದ ಜವಾಬ್ದಾರಿಯನ್ನು ಗುಲ್ಬದಿನ್ ನೈಬ್‌ಗೆ ವಹಿಸಲಾಗಿದೆ.

ಇವರ ಜತೆ, ಮೊಹಮ್ಮದ್ ನಬಿ, ರಶೀದ್ ಖಾನ್, ಮೊಹಮ್ಮದ್ ಶಹಜಾದ್ ಹಾಗೂ ಸಮಿಉಲ್ಲಾ ಶೆನ್ವಾರಿ ಅವರು ತಂಡಕ್ಕೆ ಆಯ್ಕೆಯಾಗಿದ್ದಾರೆ. ವಿಕೆಟ್ ಕೀಪರ್ ಬ್ಯಾಟ್ಸ್‌ಮನ್ ಇಕ್ರಾಂ ಅಲಿಖಿಲ್ ಅವರನ್ನು ವಿಶ್ವಕಪ್‌ಗೆ ಪರ್ಯಾಯ ಆಟಗಾರನಾಗಿ ಆಯ್ಕೆ ಮಾಡಲಾಗಿದೆ.

## ಹೈದರಾಬಾದ್‌ಗೆ ಶಿಫ್ಟ್ ಆದ ಫೈನಲ್

**ಹೈದರಾಬಾದ್:** ತಮಿಳುನಾಡು ಕ್ರಿಕೆಟ್ ಅಸೋಸಿಯೇಷನ್‌ನ ಆಡಳಿತ ಮಂಡಳಿ ಎಂಎ ಚಿದಂಬರಂ ಸ್ಟೇಡಿಯಂನಲ್ಲಿನ ಐ, ಜೆ ಮತ್ತು ಕೆ ಸ್ಟ್ಯಾಂಡ್‌ಗಳ ತೆರವಿಗೆ ಅನುಮತಿ ನೀಡದ ಹಿನ್ನೆಲೆಯಲ್ಲಿ ಐಪಿಎಲ್ ಫೈನಲ್ ಪಂದ್ಯವನ್ನು ಚೆನ್ನೈನಿಂದ ಹೈದರಾಬಾದಿನ ಉಪ್ಪಳದಲ್ಲಿರುವ ರಾಜೀವ್ ಗಾಂಧಿ ಅಂತಾರಾಷ್ಟ್ರೀಯ ಸ್ಟೇಡಿಯಂಗೆ ಬದಲಾಯಿಸಿದೆ.

ಮೇ 12 ರಂದು ಫೈನಲ್ ಪಂದ್ಯ ನಡೆಯಲಿದೆ. ಮೊದಲ 2 ಸ್ಥಾನ ಪಡೆಯುವ ತಂಡಗಳಿಗೆ ನಡೆಯುವ ಕ್ವಾಲಿಫೈಯರ್ ಪಂದ್ಯ ಮಾತ್ರ ಚೆನ್ನೈನಲ್ಲೇ ನಡೆಯಲಿದೆ.

3 ಮತ್ತು4 ಸ್ಥಾನ ಪಡೆಯುವ ತಂಡಗಳಿಗೆ ನಡೆಯುವ ಎಲಿಮಿನೇಟರ್ ಪಂದ್ಯಗಳು ವಿಶಾಖಪಟ್ಟಣದಲ್ಲಿ ನಡೆಯಲಿವೆ. ಈ ಪಂದ್ಯದಲ್ಲಿ ಗೆದ್ದ ತಂಡಕ್ಕೂ ಮೊದಲ ಕ್ವಾಲಿಫೈಯರ್‌ನಲ್ಲಿ ಸೋತ ತಂಡಕ್ಕೂ ನಡೆಯುವ ಎರಡನೇ ಕ್ವಾಲಿಫೈಯರ್ ಪಂದ್ಯ ವಿಶಾಖಪಟ್ಟಣದಲ್ಲೇ ನಡೆಯಲಿದೆ.

**ಪ್ಲೇ ಆಫ್ ವೇಳಾಪಟ್ಟಿ**
- ಮೇ 07– ಕ್ವಾಲಿಫೈಯರ್ 1– ಚೆನ್ನೈ
- ಮೇ 08– ಎಲಿಮಿನೇಟರ್ - ವಿಶಾಖಪಟ್ಟಣ
- ಮೇ 10– ಕ್ವಾಲಿಫೈಯರ್2– ವಿಶಾಖಪಟ್ಟಣ
- ಮೇ 12 – ಫೈನಲ್ - ಹೈದರಾಬಾದ್

## ಚೆನ್ನೈನಲ್ಲಿ ಸೂಪರ್ ಸನ್‌ರೈಸ್

**ಚೆನ್ನೈ:** ಸತತ ಎರಡು ಪಂದ್ಯಗಳಲ್ಲಿ ಸೋತು ನಿರಾಶೆ ಅನುಭವಿಸಿರುವ ಚೆನ್ನೈ ಸೂಪರ್ ಕಿಂಗ್ಸ್, 12ನೇ ಆವೃತ್ತಿಯ ಐಪಿಎಲ್‌ನ 41ನೇ ಪಂದ್ಯದಲ್ಲಿ ಸನ್ ರೈಸರ್ಸ್ ಹೈದರಾಬಾದ್ ವಿರುದ್ಧ ಮಂಗಳವಾರ ತವರು ಅಂಗಳ ಎಂ.ಎ ಚಿದಂಬರಂ ಕ್ರೀಡಾಂಗಣದಲ್ಲಿ ಸೆಣಸಲಿದೆ.

ಚೆನ್ನೈ ಆಡಿರುವ 10 ಪಂದ್ಯಗಳಲ್ಲಿ 7ರಲ್ಲಿ ಜಯಿಸಿ, ಇನ್ನುಳಿದ ಮೂರು ಪಂದ್ಯಗಳಲ್ಲಿ ಸೋಲು ಅನುಭವಿಸಿದ್ದು 14 ಪಾಯಿಂಟ್‌ಗಳೊಂದಿಗೆ ಅಂಕಪಟ್ಟಿಯಲ್ಲಿ ಅಗ್ರ ಸ್ಥಾನದಲ್ಲಿದೆ. ಹೈದರಾಬಾದ್ 9 ಪಂದ್ಯಗಳಲ್ಲಿ ಐದರಲ್ಲಿ ಗೆಲುವು ಪಡೆದು, ಇನ್ನುಳಿದ ನಾಲ್ಕರಲ್ಲಿ ಸೋಲು ಅನುಭವಿಸಿದೆ. 10 ಅಂಕಗಳೊಂದಿಗೆ ಗುಂಪು ಪಟ್ಟಿಯಲ್ಲಿ ನಾಲ್ಕನೇ ಸ್ಥಾನದಲ್ಲಿದೆ.

ಚೆನ್ನೈ ಬ್ಯಾಟಿಂಗ್ ವಿಭಾಗದಲ್ಲಿ ಧೋನಿ ಅದ್ಭುತ ಲಯದಲ್ಲಿದ್ದಾರೆ. ಆರಂಭಿಕ ಶೇನ್ ವ್ಯಾಟ್ಸನ್ ಹಾಗೂ ಫಾಫ್ ಡುಪ್ಲೆಸಿಸ್ ತಂಡಕ್ಕೆ ಉತ್ತಮ ಆರಂಭ ನೀಡುವ ಅಗತ್ಯತೆ ಇದೆ. ಕಳೆದ ಪಂದ್ಯಗಳಲ್ಲಿ ಈ ಜೋಡಿ ಆರ್ಭಟ ನಡೆಸುವಲ್ಲಿ ವಿಫಲರಾಗಿತ್ತು. ಇನ್ನುಳಿದಂತೆ ಸುರೇಶ್ ರೈನಾ, ರಾಯುಡು, ಕೇದಾರ್ ಜಾಧವ್ ಸ್ಥಿರ ಪ್ರದರ್ಶನ ತೋರುವಲ್ಲಿ ವಿಫಲರಾಗುತ್ತಿದ್ದಾರೆ. ಇವರು ಲಯಕ್ಕೆ ಮರಳುವ ಅಗತ್ಯತೆ ಇದೆ.

ಬೌಲಿಂಗ್ ವಿಭಾಗದಲ್ಲಿ ದೀಪಕ್ ಚಾಹರ್ ಪ್ರಮುಖ ಶಕ್ತಿಯಾಗಿದ್ದಾರೆ. ಇವರ ಜತೆ ರವೀಂದ್ರ ಜಡೇಜಾ ಇಮ್ರಾನ್ ತಾಹೀರ್ ಕೂಡ ಅಗತ್ಯಕ್ಕೆ ತಕ್ಕಂತೆ ಬೌಲಿಂಗ್ ಮಾಡುತ್ತಿರುವುದು ತಂಡದ ಬೌಲಿಂಗ್ ಶಕ್ತಿ ಹೆಚ್ಚಿಸಿದೆ.

ಸತತ ಎರಡು ಪಂದ್ಯಗಳಲ್ಲಿ ಗೆದ್ದು ಹುಮ್ಮಸ್ಸಿನಲ್ಲಿರುವ ಹೈದರಾಬಾದ್‌ಗೆ ಮತ್ತೊಂದು ಗೆಲುವಿನ ತೋರಣ ಕಟ್ಟಲು ಪ್ಲಾನ್ ಮಾಡಿಕೊಂಡಿದೆ. ಹೈದರಾಬಾದ್ ಬ್ಯಾಟಿಂಗ್ ವಿಭಾಗದಲ್ಲಿ ಆರಂಭಿಕರಾದ ಡೇವಿಡ್ ವಾರ್ನರ್ ಹಾಗೂ ಜಾನಿ ಬೈರ್‌ಸ್ಟೋ ಅವರೇ ಪ್ರಮುಖ ಶಕ್ತಿ.

**ಸಂಭಾವ್ಯ ಆಟಗಾರರು**

**ಸನ್ ರೈಸರ್ಸ್ ಹೈದರಾಬಾದ್:** ಡೇವಿಡ್ ವಾರ್ನರ್, ಜಾನಿ ಬೈರ್‌ಸ್ಟೋ (ವಿ.ಕೀ), ಕೇನ್ ವಿಲಿಯಮ್ಸನ್ (ನಾಯಕ), ವಿಜಯ್ ಶಂಕರ್, ದೀಪಕ್ ಹೂಡಾ, ಯೂಸುಫ್ ಪಠಾಣ್, ರಶೀದ್ ಖಾನ್, ಶಹಬಾಜ್ ನದೀಮ್, ಭುವನೇಶ್ವರ ಕುಮಾರ್, ಸಂದೀಪ್ ಶರ್ಮಾ, ಕೆ ಖಲೀಲ್ ಅಹ್ಮದ್.

**ಚೆನ್ನೈ ಸೂಪರ್ ಕಿಂಗ್ಸ್:** ಶೇನ್ ವ್ಯಾಟ್ಸನ್, ಫಾಫ್ ಡು ಪ್ಲೆಸಿಸ್, ಸುರೇಶ್ ರೈನಾ, ಅಂಬಾಟಿ ರಾಯುಡು, ಎಂ.ಎಸ್ ಧೋನಿ (ನಾಯಕ ಮತ್ತು ವಿ.ಕೀ), ಕೇದಾರ್ ಜಾಧವ್, ಡ್ವೇನ್ ಬ್ರಾವೋ, ರವೀಂದ್ರ ಜಡೇಜಾ, ದೀಪಕ್ ಚಹಾರ್, ಶಾರ್ದೂಲ್ ಠಾಕೂರ್, ಇಮ್ರಾನ್ ತಾಹಿರ್.

## ಮೀರಾಭಾಯಿ ಚಾನು ಕೈತಪ್ಪಿದ ಕಂಚು..!

**ನಿಂಗ್ಬೊ (ಚೀನಾ):** ಮಾಜಿ ವಿಶ್ವ ಚಾಂಪಿಯನ್ ಮೀರಾಬಾಯಿ ಚಾನು ಇಲ್ಲಿ ನಡೆಯುತ್ತಿರುವ ಏಷ್ಯನ್ ವೇಟ್ ಲಿಫ್ಟಿಂಗ್ ಚಾಂಪಿಯನ್‌ಶಿಪ್‌ನಲ್ಲಿ ಪದಕದಿಂದ ವಂಚಿತರಾಗಿದ್ದಾರೆ. ಮಹಿಳೆಯರ 49 ಕೆ.ಜಿ ವಿಭಾಗದಲ್ಲಿ ಒಟ್ಟು 199 ಕೆ.ಜಿ (ಸ್ನ್ಯಾಚ್‌ನಲ್ಲಿ 86 ಕೆ.ಜಿ + ಕ್ಲೀನ್ ಅಂಡ್ ಜರ್ಕ್‌ನಲ್ಲಿ 113 ಕೆ.ಜಿ) ಭಾರ ಎತ್ತಿ 4ನೇ ಸ್ಥಾನ ಪಡೆದರು. ಚೀನಾದ ಝಾಂಗ್ ರೊಂಗ್ ಸಹ 199 ಕೆ.ಜಿ (88 ಕೆ.ಜಿ+ 111 ಕೆ.ಜಿ) ಭಾರ ಎತ್ತಿದರು. ಆದರೆ ಟೈ ಬ್ರೇಕರ್ ನಿಯಮದ ಪ್ರಕಾರ ಸ್ನ್ಯಾಚ್‌ನಲ್ಲಿ ಹೆಚ್ಚು ತೂಕ ಎತ್ತಿದವರಿಗೆ ಉನ್ನತ ಸ್ಥಾನ ಸಿಗಲಿದೆ. ಹೀಗಾಗಿ 3ನೇ ಸ್ಥಾನ ಪಡೆದ ಝಾಂಗ್ ಕಂಚು ಜಯಿಸಿದರು. ಚಾನು ಕ್ಲೀನ್ ಅಂಡ್ ಜರ್ಕ್‌ನ 3ನೇ ಯತ್ನದಲ್ಲಿ 115 ಕೆ.ಜಿ ಎತ್ತುವಲ್ಲಿ ವಿಫಲರಾದರು. ಒಂದೊಮ್ಮೆ ಯಶಸ್ವಿಯಾಗಿದ್ದರೆ ಬೆಳ್ಳಿ ಪದಕ ಸಿಗುತ್ತಿತ್ತು. ಇದೇ ವೇಳೆ ಪುರುಷರ 67 ಕೆ.ಜಿ ವಿಭಾಗದಲ್ಲಿ 16 ವರ್ಷದ ಜೆರೆಮಿ ಲಾಲ್ರಿನ್ನುಂಗಾ ಬರೋಬ್ಬರಿ 15 ದಾಖಲೆಗಳನ್ನು ಮುರಿದರು. 6 ಅಂತಾರಾಷ್ಟ್ರೀಯ (3 ಕಿರಿಯರ ವಿಶ್ವ 3 ಕಿರಿಯರ ಏಷ್ಯನ್), 9 ರಾಷ್ಟ್ರೀಯ (3 ಕಿರಿಯರ, 3 ಬಾಲಕರ ಹಾಗು 3 ಹಿರಿಯ) ದಾಖಲೆಗಳನ್ನು ಮುರಿದರು.

## ಲಾ ಲೀಗ ಕ್ಲಬ್‌ಗಳಲ್ಲಿ ತರಬೇತಿ!

**ಮುಂಬಯಿ:** ಭಾರತದಲ್ಲಿರುವ ಸ್ಪೇನ್‌ನ ರಾಯಭಾರಿ ಕಚೇರಿಯೊಂದಿಗೆ ಸಂಪರ್ಕದಲ್ಲಿರುವ ಲಾ ಲೀಗ ಅಧಿಕಾರಿಗಳು, ಭಾರತದ ವಿದ್ಯಾರ್ಥಿಗಳನ್ನು ಲಾ ಲೀಗ ಫುಟ್ ಬಾಲ್ ಸ್ಕೂಲ್ ಸ್ಕಾಲರ್‌ಶಿಪ್‌ಗೆ 2018-19ರ ಅವಧಿಯಿಂದ ಪ್ರತಿ ವರ್ಷ ಆಯ್ಕೆ ಮಾಡುವ ಯೋಜನೆ ಹೊಂದಿದ್ದಾರೆ.

ಭಾರತದಲ್ಲಿ ಲಾ ಲೀಗ ನಡೆಸುವ ಗ್ರಾಸ್ ರೂಟ್ ಅಭಿವೃದ್ಧಿ ಯೋಜನೆಯಲ್ಲಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲಾಗುತ್ತದೆ. ಆಯ್ಕೆ ವಿದ್ಯಾರ್ಥಿಗಳಿಗೆ ಸ್ಪೇನ್‌ಗೆ ತೆರಳಿ ಲಾ ಲೀಗ ಕ್ಲಬ್ ಅಕಾಡೆಮಿಯಲ್ಲಿ ತರಬೇತಿ ಪಡೆದುಕೊಳ್ಳುವ ಅವಕಾಶ ಲಭ್ಯವಾಗಲಿದೆ. ಪ್ರತಿವರ್ಷ ದೀಪಾವಳಿ ಹಬ್ಬದ ಸಂದರ್ಭದಲ್ಲಿ ಆಯ್ಕೆ ಪ್ರಕ್ರಿಯೆ ನಡೆಯಲಿದೆ. ಈ ಆಯ್ಕೆ ಪ್ರಕ್ರಿಯೆಯಲ್ಲಿ 32 ಪ್ರತಿಭಾನ್ವಿತ ಆಟಗಾರರನ್ನು ಗುರುತಿಸಿ, ನಂತರ ಜನವರಿಯಲ್ಲಿ ಮೆಟ್ರೋ ನಗರಗಳಲ್ಲಿ ಅಂತಿಮ ಹಂತದ ಆಯ್ಕೆ ನಡೆಸಲಾಗುತ್ತದೆ.

ಆಯ್ಕೆಯಾದ ವಿದ್ಯಾರ್ಥಿಗಳು ಸ್ಪೇನ್‌ಗೆ ಪ್ರಯಾಣ ಬೆಳೆಸಲಿದ್ದು ಮೇ ತಿಂಗಳಲ್ಲಿ ಲಾ ಲೀಗದ ಫುಟ್ ಬಾಲ್ ಅಕಾಡೆಮಿಗಳಲ್ಲಿ ತರಬೇತಿ ಪಡೆದುಕೊಳ್ಳಲಿದ್ದಾರೆ. ಜೊತೆಗೆ ಸ್ಪೇನ್‌ನ ಶ್ರೇಷ್ಠ ಯುವ ಫುಟ್‌ಬಾಲ್ ಆಟಗಾರರೊಂದಿಗೆ ಬೆರೆತು ಆಡುವ ಅವಕಾಶವೂ ಸಿಗಲಿದೆ.

## ಚೆನ್ನೈ ವಿರುದ್ಧ 1 ರನ್ ಅಂತರದಲ್ಲಿ ರೋಚಕ ಜಯ ಪಡೆದ ಕೊಹ್ಲಿ ಬಳಗ

**ಬೆಂಗಳೂರು:** ಚೆನ್ನೈ ವಿರುದ್ಧ ಮೊದಲ ಪಂದ್ಯ ಸೋಲಿನಿಂದ ಎದೆಗುಂದಿದ್ದ ವಿರಾಟ್ ಕೊಹ್ಲಿ ಪಡೆ ಭಾನುವಾರ ರಾತ್ರಿ ಚಿನ್ನಸ್ವಾಮಿ ಕ್ರೀಡಾಂಗಣದಲ್ಲಿ ನಡೆದ ಪಂದ್ಯದ ಕೊನೆಯ ಓವರ್‌ನಲ್ಲಿ 26 ರನ್ ಬೇಕಿದ್ದ ಚೆನ್ನೈ ತಂಡವನ್ನು 1 ರನ್‌ನಿಂದ ಕಟ್ಟಿ ಹಾಕುವ ಮೂಲಕ ರೋಚಕ ಗೆಲುವು ಸಾಧಿಸಿದೆ.

ಚೆನ್ನೈ ವಿರುದ್ಧದ ಸತತ ಸೋಲು ಕಂಡಿರುವ ಆರ್‌ಸಿಬಿ ತಂಡ ಬೆಂಗಳೂರಿನಲ್ಲಿ ನಡೆದ ಐಪಿಎಲ್ ಪಂದ್ಯದಲ್ಲಿ ಟಾಸ್ ಸೋತು ಮೊದಲು ಬ್ಯಾಟಿಂಗ್ ಮಾಡಿದ್ದು 161 ರನ್ ಪೇರಿಸಿತ್ತು. 162 ರನ್ ಗಳ ಟಾರ್ಗೆಟ್ ಬೆನ್ನಟ್ಟಿದ್ದ ಚೆನ್ನೈಗೆ ಡೇಲ್ ಸ್ಟೇನ್ ಆರಂಭಿಕ ಆಘಾತ ನೀಡಿದರು. ಚೆನ್ನೈ 28 ರನ್ ಗಳಿಗೆ 4 ವಿಕೆಟ್ ಕಳೆದುಕೊಂಡು ಸಂಕಷ್ಟಕ್ಕೆ ಸಿಲುಕಿತ್ತು.

ಈ ವೇಳೆ ಎಂಎಸ್ ಧೋನಿ ಅದ್ಭುತ ಬ್ಯಾಟಿಂಗ್ ಮಾಡಿ ತಂಡವನ್ನು ಗೆಲುವಿನ ಹಾದಿಗೆ ತಂದಿಟ್ಟಿದ್ದರು. ಕೊನೆಯ ಓವರ್‌ನಲ್ಲಿ 4,6,6,2,6 ರನ್ ಬಾರಿಸಿದ್ದರು. ಈ ವೇಳೆ ಕೊನೆಯ ಎಸೆತದಲ್ಲಿ 2 ರನ್ ಬೇಕಿತ್ತು. ಈ ವೇಳೆ ಭರ್ಜರಿ ಹೊಡೆತಕ್ಕೆ ಧೋನಿ ಮುಂದಾದರು. ಆದರೆ ಸಾಧ್ಯವಾಗದ ಚೆಂಡು ನೇರವಾಗಿ ಕೀಪರ್ ಪಾರ್ಥಿವ್ ಪಟೇಲ್ ಕೈಸೇರಿತು. ಈ ವೇಳೆ ಒಂದು ರನ್ ಓಡಲು ಮುಂದಾದ ವೇಳೆ ಪಾರ್ಥಿವ್ ರನೌಟ್ ಮಾಡಿದರು.

ಬೆಂಗಳೂರಿನ ಚಿನ್ನಸ್ವಾಮಿ ಕ್ರೀಡಾಂಗಣದಲ್ಲಿ ನಡೆಯುತ್ತಿರುವ ಐಪಿಎಲ್ ಪಂದ್ಯದಲ್ಲಿ ಟಾಸ್ ಸೋತು ಮೊದಲು ಬ್ಯಾಟಿಂಗ್ ಮಾಡಿದ ಆರ್‌ಸಿಬಿ ತಂಡ ನಿಗದಿತ ಓವರ್‌ನಲ್ಲಿ 7 ವಿಕೆಟ್ ನಷ್ಟಕ್ಕೆ 161 ರನ್ ಪೇರಿಸಿದೆ. ಇದರೊಂದಿಗೆ ಚೆನ್ನೈಗೆ 162 ರನ್ ಗುರಿ ನೀಡಿತ್ತು.

ಆರ್‌ಸಿಬಿ ಪರ ಪಾರ್ಥಿವ್ ಪಟೇಲ್ 53, ಎಬಿ ಡಿವಿಲಿಯರ್ಸ್ 25, ಮೊಯಿನ್ ಅಲಿ 26 ರನ್ ಪೇರಿಸಿದ್ದಾರೆ. ಚೆನ್ನೈ ಪರ ಬೌಲಿಂಗ್‌ನಲ್ಲಿ ದೀಪಕ್ ಚಹರ್, ಜಡೇಜಾ ಹಾಗೂ ಡ್ವೇನ್ ಬ್ರಾವೋ ತಲಾ 2 ವಿಕೆಟ್ ಪಡೆದಿದ್ದಾರೆ.

### ಕೊನೆಯ ಓವರ್ ಕುತೂಹಲ

ಚೆನ್ನೈ ಕೊನೆಯ ಓವರ್‌ನಲ್ಲಿ ಗೆಲುವು ಸಾಧಿಸಲು 26ರನ್ ಗಳ ಅವಶ್ಯಕತೆ ಇತ್ತು. ಕ್ರೀಸ್‌ನಲ್ಲಿ ಮಹೇಂದ್ರ ಸಿಂಗ್ ಧೋನಿ ಇದ್ದರು. ಆ ವೇಳೆ ಉಮೇಶ್ ಯಾದವ್‌ಗೆ ಕೊಹ್ಲಿ ಬಾಲ್ ಮಾಡಲು ಅವಕಾಶ ನೀಡಿದರು. ಕೊನೆಯ ಓವರ್‌ಗಳಲ್ಲಿ ಅತ್ಯಂತ ಹೆಚ್ಚು ರನ್ ಗಳನ್ನು ನೀಡುತ್ತಾರೆ ಎನ್ನುವ ಕುಖ್ಯಾತಿಗೆ ಪಾತ್ರವಾಗಿರುವ ಉಮೇಶ್ ಯಾದವ್ ಮೇಲೆ ನಾಯಕ ವಿರಾಟ್ ಕೊಹ್ಲಿಯನ್ನು ಬಿಟ್ಟರೆ ಬೇರೆಯವರಿಗೂ ನಿರೀಕ್ಷೆ ಇರಲಿಲ್ಲ. ಅದಕ್ಕೆ ತಕ್ಕಂತೆ ಧೋನಿ, ಯಾದವ್‌ರ ಮೊದಲ ಬಾಲ್‌ನಲ್ಲಿ ಬೌಂಡರಿ ಸಿಡಿಸಿದರು. ಎರಡನೇ ಎಸೆತದಲ್ಲಿ ಬಾರಿಸಿದ ಸಿಕ್ಸರ್ ಕ್ರೀಡಾಂಗಣದ ಆಚೆಗೂ ತಲುಪಿತ್ತು. 111 ಮೀಟರ್ ದೂರಕ್ಕೆ ಚೆಂಡು ಸಾಗಿದ್ದಲ್ಲದೇ ಈ ಟೂರ್ನಿಯ ಅತ್ಯಂತ ದೀರ್ಘ ಸಿಕ್ಸರ್ ಎನ್ನಿಸಿಕೊಂಡಿತು. ತದನಂತರ ಇನ್ನೊಂದು ಸಿಕ್ಸರ್ ಹಾಗೂ 2 ರನ್ ಸಿಡಿಸಿದ ಧೋನಿ ಐದನೇ ಎಸೆತದಲ್ಲಿ ಮತ್ತೊಂದು ಸಿಕ್ಸರ್ ಬಾರಿಸಿದರು. ಕೊನೆಯ ಎಸೆತದಲ್ಲಿ ಗೆಲುವಿಗೆ ಅಗತ್ಯವಿದ್ದದ್ದು 2 ರನ್ ಮಾತ್ರ. ಈ ಸಂದರ್ಭದಲ್ಲಿ ಪಾರ್ಥಿವ್ ಪಟೇಲ್ ಕೈಚಳಕದಿಂದ ಬೌಲರ್ ಶಾರ್ದೂಲ್ ಠಾಕೂರ್ ರನೌಟ್ ಆಗುವ ಮೂಲಕ ಬೆಂಗಳೂರಿಗೆ 1 ರನ್ ಗಳ ರೋಚಕ ಗೆಲುವು ಸಾಧಿಸಲು ಕಾರಣರಾದರು.



# ಶ್ರೀಲಂಕಾ ಬಾಂಬ್ ಸ್ಫೋಟ: ನಿರ್ಮಾಪಕ ಮನೋಹರ್ ಪಾರು

ಶ್ರೀಲಂಕಾದಲ್ಲಿ ನಡೆದ ಬಾಂಬ್ ಸ್ಫೋಟದಿಂದ ಕನ್ನಡ ಸಿನಿಮಾ ರಂಗದ ಖ್ಯಾತ ನಿರ್ಮಾಪಕ ಸಿ.ಆರ್. ಮನೋಹರ್ ಅವರು ಕೂದಲೆಳೆಯ ಅಂತರದಿಂದ ಪಾರಾಗಿದ್ದಾರೆ ಎಂಬ ಸುದ್ದಿ ತಡವಾಗಿ ಬೆಳಕಿಗೆ ಬಂದಿದೆ. ಭಾನುವಾರ ಬೆಳಗ್ಗೆ ಶ್ರೀಲಂಕಾದ ಕೊಲಂಬೋದಲ್ಲಿ ಸರಣಿ ಬಾಂಬ್ ಸ್ಫೋಟವಾಗಿತ್ತು. ಇದರಲ್ಲಿ ಇಬ್ಬರು ಭಾರತೀಯರು ಸೇರಿ ಸುಮಾರು 290ಕ್ಕೂ ಅಧಿಕ ಜನರ ಸಾವನ್ನಪ್ಪಿದ್ದಾರೆ. ಇದೇ ಸಂದರ್ಭದಲ್ಲಿ ಶ್ರೀಲಂಕಾಗೆ ತೆರಳಿದ್ದ ನಿರ್ಮಾಪಕ ಸಿ.ಆರ್. ಮನೋಹರ್ ಅವರು ತಾಜ್ ಹೋಟೆಲ್ ನಲ್ಲಿ ತಂಗಿದ್ದರು. ಅದೇ ಹೋಟೆಲ್ ಪಕ್ಕದಲ್ಲೇ ಬಾಂಬ್ ಬ್ಲಾಸ್ಟ್ ಪ್ರಕರಣ ನಡೆದಿದೆ. ಇದರಿಂದ ಸಹಜವಾಗಿ ಆತಂಕಗೊಂಡ ಸಿ.ಆರ್. ಮನೋಹರ್ ಅವರು ನಿನ್ನೆ ಸಂಜೆ ಭಾರತಕ್ಕೆ ವಾಪಸ್ ಆಗಿದ್ದಾರೆ. ಮತ್ತೊಂದೆಡೆ ಬಾಂಬ್ ಸ್ಫೋಟದಿಂದ ತಮಿಳು ನಟಿ ರಾಧಿಕಾ ಶರತ್‌ಕುಮಾರ್ ಕೂಡ ಕೂದಲೆಳೆಯ ಅಂತರದಿಂದ ಪಾರಾಗಿದ್ದಾರೆ. ಭಾನುವಾರ ಬೆಳಗ್ಗೆ ಸಿನ್ನಮೋನ್ ಹೋಟೆಲ್ ನಲ್ಲಿ ತಂಗಿದ್ದ ರಾಧಿಕಾ, ಅಲ್ಲಿಂದ ಹೊರಗೆ ಹೋದ ಕೆಲವೇ ಸಮಯದಲ್ಲಿ ಬಾಂಬ್ ಸ್ಫೋಟವಾಗಿದೆ. ಅದೃಷ್ಟವಶಾತ್ ರಾಧಿಕಾ ಅವರು ಸಾವಿನಿಂದ ಪಾರಾಗಿದ್ದಾರೆ. ಸಿ. ಆರ್. ಮನೋಹರ್ ಅವರು ವಿಧಾನಪರಿಷತ್ ಸದಸ್ಯ ಹಾಗೂ ಸಿನಿಮಾ ನಿರ್ಮಾಪಕ. ಸುದೀಪ್ ಮತ್ತು ಶಿವರಾಜ್ ಕುಮಾರ್ ಅಭಿನಯಿಸಿದ್ದ ನೂರು ಕೋಟಿ ಬಜೆಟ್‌ನ ದಿ ವಿಲನ್ ಸಿನಿಮಾವನ್ನು ಇತ್ತೀಚೆಗೆ ನಿರ್ಮಾಣ ಮಾಡಿದ್ದರು.

# ಅಂಬರೀಶ್ ಹುಟ್ಟುಹಬ್ಬಕ್ಕೆ ಅಂತ

ಎಂಭತ್ತರ ದಶಕದಲ್ಲಿ ಕನ್ನಡ ಚಿತ್ರರಂಗದಲ್ಲಿ ಹೊಸ ದಾಖಲೆಯನ್ನೇ ನಿರ್ಮಿಸಿದ ಚಿತ್ರ ಅಂತ. 1981ರಲ್ಲಿ ಬಿಡುಗಡೆ ಯಾಗಿದ್ದ ಈ ಚಿತ್ರಕ್ಕೆ ಎಸ್.ವಿ.ರಾಜೇಂದ್ರ ಸಿಂಗ್ ಬಾಬು ಆಕ್ಷನ್ ಕಟ್ ಹೇಳಿದ್ದರು. ರೆಬೆಲ್‌ಸ್ಟಾರ್ ಅಂಬರೀಶ್ ಇನ್ಸ್‌ಪೆಕ್ಟರ್ ಸುಶೀಲ್‌ಕುಮಾರ್ ಪಾತ್ರದ ಮೂಲಕ ಕನ್ನಡ ನಾಡಿನ ಜನತೆಯಲ್ಲಿ ದೇಶಾಭಿಮಾನದ ಕಿಚ್ಚು ಹಚ್ಚಿಸಿದ್ದರು. ಅಲ್ಲದೆ ಅಂಬರೀಶ್ ಅವರ ಕನ್ವರ್‌ಲಾಲ್ ಎಂಬ ನೆಗೆಟಿವ್ ಪಾತ್ರವನ್ನು ಕೂಡ ಅಂತ ಚಿತ್ರದಲ್ಲಿ ನಿರ್ವಹಿಸಿದ್ದರು. ಅನಂತರ ಅಂಬರೀಶ್ ಅಭಿನಯಿಸಿದ್ದ ಆ ಕನ್ವರ್‌ಲಾಲ್ ಪಾತ್ರ ಮತ್ತೊಂದು ಚಿತ್ರದ ನಿರ್ಮಾಣಕ್ಕೂ ಕಾರಣವಾಯಿತು. ಸುಧಾ ವಾರ ಪತ್ರಿಕೆಯಲ್ಲಿ ಪ್ರಕಟವಾದ ಹೆಚ್. ಕೆ. ಅನಂತರಾವ್ ಅವರ ಕಾದಂಬರಿಯನ್ನಾಧರಿಸಿ ನಿರ್ಮಾಣವಾದ ಆ ಚಿತ್ರ, ಈಗ ಮತ್ತೊಮ್ಮೆ ನೂತನ ತಂತ್ರಜ್ಞಾನದೊಂದಿಗೆ ಮೇ ತಿಂಗಳಲ್ಲಿ ಅಂಬರೀಶ್ ಅವರ ಹುಟ್ಟುಹಬ್ಬದ ಸಮಯದಲ್ಲಿ ಬೆಳ್ಳಿತೆರೆಯ ಮೇಲೆ ಬರುತ್ತಿದೆ. ಪರಿಮಳ ಆರ್ಟ್ ಮೂಲಕ ಹೆಚ್. ಎನ್. ಮಾರುತಿ ಹಾಗೂ ವೇಣುಗೋಪಾಲ್ ಈ ಚಿತ್ರವನ್ನು ನಿರ್ಮಿಸಿದ್ದರು. ಎಸ್.ವಿ.ರಾಜೇಂದ್ರ ಸಿಂಗ್ ಬಾಬು ಈ ಚಿತ್ರಕ್ಕೆ ಚಿತ್ರಕಥೆ ಬರೆದು ನಿರ್ದೇಶನ ಮಾಡಿದ್ದರು. ಜಿ.ಕೆ. ವೆಂಕಟೇಶ್ ಅವರ ಸಂಗೀತ ಸಂಯೋಜನೆಯಲ್ಲಿ ಮೂಡಿಬಂದಿದ್ದ ಅಂತ ಚಿತ್ರದ ಸುಮಧುರ ಗೀತೆಗಳು ಇಂದಿಗೂ ಜನಮಾನಸದಲ್ಲಿ ಅಚ್ಚಳಿಯದೇ ನಿಂತಿವೆ. ಈ ಚಿತ್ರವನ್ನು ಈಗ ಡಿಜಿಟಲ್ ಫಾರ್ಮಾಟ್‌ನಲ್ಲಿ ಬಿಡುಗಡೆ ಮಾಡಲು ಸಿದ್ಧತೆಗಳನ್ನು ಮಾಡಿಕೊಳ್ಳಲಾಗಿದೆ.

ಹೊಸ ರೂಪದ 'ಅಂತ' ಚಿತ್ರವನ್ನು ರಾಜ್ಯಾದ್ಯಂತ ಅತೀ ಹೆಚ್ಚು ಚಿತ್ರಮಂದಿರಗಳಲ್ಲಿ ಅದ್ದೂರಿಯಾಗಿ ಬಿಡುಗಡೆ ಮಾಡಲಾಗುತ್ತಿದೆ ಎಂದು ನಿರ್ಮಾಪಕ ವೇಣುಗೋಪಾಲ್ ಅವರು ತಿಳಿಸಿದ್ದಾರೆ. ಈ ಚಿತ್ರದ ಪ್ರಮುಖ ತಾರಾಗಣದಲ್ಲಿ ರೆಬೆಲ್‌ಸ್ಟಾರ್ ಅಂಬರೀಶ್ (ದ್ವಿಪಾತ್ರ) ಲಕ್ಷ್ಮಿ, ಜಯಮಾಲಾ, ಲತಾ, ಪಂಡರೀಬಾಯಿ, ವಜ್ರಮುನಿ, ಪ್ರಭಾಕರ್, ಸುಂದರ ಕೃಷ್ಣ ಅರಸ್, ಶಕ್ತಿ ಪ್ರಸಾದ್, ಲಕ್ಷ್ಮಣ್, ಮುಸುರಿ ಕೃಷ್ಣಮೂರ್ತಿ, ಸಿ.ಸೀತಾರಾಮ್ ಮುಂತಾದವರು ನಟಿಸಿದ್ದರು.



# ಸಂತು ಲವ್ಸ್ ಸಂಧ್ಯಾ ಚಿತ್ರಕ್ಕೆ ಚಾಲನೆ

ನಾಲ್ಕು ವರ್ಷಗಳ ಹಿಂದೆ ಶ್ರೀನಿವಾಸಪುರ ತಾಲ್ಲೂಕಿನ ಯಲ್ದೂರು ಎಂಬ ಗ್ರಾಮದಲ್ಲಿ ನಡೆದಂಥ ನೈಜ ಘಟನೆಯೊಂದನ್ನು ಆಧರಿಸಿ ಕಥೆ ಮಾಡಿರುವ ಚಲನಚಿತ್ರವೊಂದು ತೆರೆಮೇಲೆ ಮೂಡಿಬರುತ್ತಿದೆ. ಸಂತು ಲವ್ಸ್ ಸಂಧ್ಯಾ ಎಂಬ ಹೆಸರಿನಲ್ಲಿ ನಿರ್ಮಾಣವಾಗುತ್ತಿರುವ ಈ ಚಿತ್ರಕ್ಕೆ ಆ ಘಟನೆ ನಡೆದ ಸ್ಥಳವಾದ ಮುಳಬಾಗಿಲಿನ ಸಮೀಪದ ಯಲ್ದೂರು ಗ್ರಾಮದ ಗಂಗಾ ಭವಾನಿ ದೇವಸ್ಥಾನದಲ್ಲಿ ಮುಹೂರ್ತ ಸಮಾರಂಭ ನಡೆಯಿತು. ಚಿತ್ರದ ಆರಂಭಿಕ ದೃಶ್ಯಕ್ಕೆ ನಿವೃತ್ತ ಅರಣ್ಯಾಧಿಕಾರಿ ಕೆಂಪಣ್ಣ ಅವರು ಕ್ಯಾಮೆರಾ ಚಾಲನೆ ಮಾಡಿದರೆ, ಚಿತ್ರ ನಿರ್ಮಾಪಕ ಶಿವಕುಮಾರ್ ಅವರು ಆರಂಭ ಫಲಕ ತೋರಿದರು. ಆರ್. ಕೆ. ಗಾಂಧಿ ಅವರು ನೈಜಘಟನೆಯನ್ನು ಆಧಾರವಾಗಿಟ್ಟುಕೊಂಡು ಈ ಚಿತ್ರಕ್ಕೆ ಕತೆ, ಚಿತ್ರಕತೆ ಹಾಗೂ ಸಂಭಾಷಣೆಗಳನ್ನು ಬರೆದು ನಿರ್ದೇಶನ ಮಾಡುತ್ತಿದ್ದಾರೆ. ಸಾಹಸ ಕಲಾವಿದನಾಗಿ ರಥಾವರ, ಭರಾಟೆ, ಒಡೆಯ, ಮುತ್ತಿನಹಾರ ಸೇರಿದಂತೆ ಅರವತ್ತಕ್ಕೂ ಹೆಚ್ಚು ಕನ್ನಡ ಚಿತ್ರಗಳಿಗೆ ಕೆಲಸ ಮಾಡಿರುವ ಜೈಸುಬ್ರಮಣಿ ಈ ಚಿತ್ರದ ಮೂಲಕ ನಾಯಕನಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಪ್ರೇಮಿಗಳ ನಡುವೆ ಜಾತಿ ಎಂಬ ವಿಷಯ ಬಂದಾಗ ಅದು ಎಂಥಾ ಅನಾಹುತಕ್ಕೆ ಕಾರಣವಾಗುತ್ತದೆ ಎಂಬುದನ್ನು ಈ ಚಿತ್ರದ ಮೂಲಕ ನಿರ್ದೇಶಕರು ಹೇಳುವ ಪ್ರಯತ್ನ ಮಾಡಿದ್ದಾರೆ. ಈ ಒಂದು ನೈಜ ಘಟನೆಯ ರಿಯಲ್ ನಾಯಕ ವೆಂಕಟ್ ಎಂಬಾತ ಈಗಲೂ ಯಲ್ದೂರು ಗ್ರಾಮದಲ್ಲಿದ್ದು ಮಾನಸಿಕ ಅಸ್ವಸ್ಥನಾಗಿ ಅಲೆದಾಡುತ್ತಿದ್ದಾನೆ.

ಮನೋಜ್ ಮೂವೀ ಮೇಕರ್ಸ್ ಲಾಂಛನದಲ್ಲಿ ಶಿವಕುಮಾರ್, ದೇವರಾಜ್ ಹಾಗೂ ಶಬರೀಶ್ ಸೇರಿ ನಿರ್ಮಿಸುತ್ತಿರುವ ಈ ಚಿತ್ರಕ್ಕೆ ಪೌಲ್ ರಾಜು ಅವರ ಛಾಯಾಗ್ರಹಣ, ಗಂಟಾದಿ ಕೃಷ್ಣ ಅವರ ಸಂಗೀತ ನಿರ್ದೇಶನ, ಸುರೇಶ್ ಕಂಬಳಿ ಅವರ ಸಾಹಿತ್ಯ, ಶಂಕರ್ ಸಾಹಸ ಸಂಯೋಜನೆ, ಸಾನ್ವಿ ಅವರ ನೃತ್ಯ ನಿರ್ದೇಶನ, ವಿನಯ್ ಜಿ. ಆಲೂರು ಅವರ ಸಂಕಲನವಿದೆ. ಜೈ ಸುಬ್ರಮಣಿ, ಸುಷ್ಮಾ ಗೌಡ, ಕಿಲ್ಲರ್ ವೆಂಕಟೇಶ್, ಬ್ಯಾಂಕ್ ಜನಾರ್ಧನ್, ಹೊನ್ನವಳ್ಳಿ ಕೃಷ್ಣ, ಜ್ಯೋತಿ ಮೂರೂರು, ಕಾವ್ಯ ಪ್ರಕಾಶ್, ದಿಂಬಾಲ ಅಶೋಕ್, ಕೋಲಾರ ಬಾಬು, ಮಹೇಶ್ ಬ್ರಾಹ್ಮಿ, ತಿರುಪತಿ ರಾಜು, ನಾಗರಾಜ್ ಮುಂತಾದವರ ತಾರಾಬಳಗ ಈ ಚಿತ್ರಕ್ಕಿದೆ.

# ಐದು ಭಾಷೆಗಳಲ್ಲಿ ಮುನಿರತ್ನ ಕುರುಕ್ಷೇತ್ರ ..!


ನಾಲ್ಕು ಭಾಷೆಗಳ ಪೋಸ್ಟರ್ ಬಿಡುಗಡೆ. ಕನ್ನಡ, ತಮಿಳು, ತೆಲುಗು ಹಾಗೂ ಮಲಯಾಳಂ ಭಾಷೆಗಳಲ್ಲಿ ಈ ಸಿನಿಮಾದ ಪೋಸ್ಟರ್ ಈಗಾಗಲೇ ರಿಲೀಸ್ ಆಗಿದ್ದು ಅಭಿಮಾನಿಗಳಲ್ಲಿ ಕುತೂಹಲವನ್ನು ಕೆರಳಿಸುತ್ತಿದೆ.

ಚಾಲೆಂಜಿಂಗ್ ಸ್ಟಾರ್ ದರ್ಶನ್ ಅಭಿನಯದ 'ಕುರುಕ್ಷೇತ್ರ' ಸಿನಿಮಾ ಯಾವಾಗ ಬರುತ್ತೆ ಎನ್ನುವ ಪ್ರಶ್ನೆ ಅಭಿಮಾನಿಗಳಲ್ಲಿ ಕಾಡುತ್ತಿದೆ. ಇವತ್ತು ರಿಲೀಸ್ ಆಗುತ್ತೆ ನಾಳೆ ರಿಲೀಸ್ ಆಗುತ್ತೆ ಅಂತ ಚಾತಕ ಪಕ್ಷಿಯಂತೆ ಕಾಯುತ್ತಿದ್ದ ಸಿನಿಪ್ರಿಯರಿಗೆ ನಿರಾಸೆ ಮಾಡುತ್ತಲೇ ಬಂದಿದ್ದ ಚಿತ್ರತಂಡ, ಈಗ ನಾಲ್ಕು ಭಾಷೆಯ ಪೋಸ್ಟರ್‌ನ್ನು ರಿಲೀಸ್ ಮಾಡಿ ಅಚ್ಚರಿ ಮೂಡಿಸಿದೆ. ಈ ಹಿಂದೆ ಕುರುಕ್ಷೇತ್ರ ಐದು ಭಾಷೆಯಲ್ಲಿ ಬರಲಿದೆ ಅಂತ ಹೇಳಲಾಗುತ್ತಿತ್ತು. ಆದ್ರೆ ಈ ಬಗ್ಗೆ ನಿರ್ಮಾಪಕ ಮುನಿರತ್ನ ಆಗಲಿ ಅಥವಾ ಚಿತ್ರತಂಡ ಯಾವುದೇ ಮಾಹಿತಿ ನೀಡಿರಲಿಲ್ಲ, ಆದ್ರೀಗ ಚಿತ್ರ ಐದು ಭಾಷೆಯಲ್ಲಿ ಬಿಡುಗಡೆಯಾಗುವುದು ಅಧಿಕೃತವಾಗಿದೆ. ಸದ್ಯ ನಾಲ್ಕು ಭಾಷೆಯ ಪೋಸ್ಟರ್‌ಗಳನ್ನು ಚಿತ್ರತಂಡ ರಿಲೀಸ್ ಮಾಡುವ ಮೂಲಕ ಅಭಿಮಾನಿಗಳ ಸಂಭ್ರಮ ಹೆಚ್ಚಿಸಿದೆ. ಚಾಲೆಂಜಿಂಗ್ ಸ್ಟಾರ್ ದರ್ಶನ್ ನಟನೆಯಲ್ಲಿ ಅದ್ದೂರಿ ವೆಚ್ಚದೊಂದಿಗೆ ನಿರ್ಮಾಣವಾಗಿರುವ ಚಿತ್ರ ಮುನಿರತ್ನ ಕುರುಕ್ಷೇತ್ರ ಚಿತ್ರವನ್ನು ಸದ್ಯದಲ್ಲೇ ಬಿಡುಗಡೆ ಮಾಡಲು ಚಿತ್ರದ ನಿರ್ಮಾಪಕ ಮುನಿರತ್ನ ಅವರು ಸಿದ್ಧತೆಗಳನ್ನು ನಡೆಸುತ್ತಿದ್ದಾರೆ. ಈವರೆಗೆ ಲೋಕಸಭಾ ಚುನಾವಣೆ ಇದ್ದುದ್ದರಿಂದ ಕುರುಕ್ಷೇತ್ರ ಸಿನಿಮಾದ ಯಾವುದೇ ಸುದ್ದಿ ಈವರೆಗೆ ಅಭಿಮಾನಿಗಳಿಗೆ ಸಿಕ್ಕಿರಲಿಲ್ಲ. ಈಗ ಚುನಾವಣೆ ಮುಗಿದಿದ್ದು ಕುರುಕ್ಷೇತ್ರ ಚಿತ್ರ ಇಷ್ಟರಲ್ಲೇ ಐದು ಭಾಷೆಗಳಲ್ಲಿ ಥಿಯೇಟರ್‌ಗಳಲ್ಲಿ ದಾಳಿಯಿಡುವ ಸೂಚನೆ ನೀಡಿದೆ. ಈಗಾಗಲೇ ಕನ್ನಡ, ತಮಿಳು, ತೆಲುಗು ಹಾಗೂ ಮಲಯಾಳಂ ಭಾಷೆಗಳಲ್ಲಿ ರಿಲೀಸಾಗಿರುವ ಈ ಸಿನಿಮಾದ ಪೋಸ್ಟರ್ ಅಭಿಮಾನಿಗಳಲ್ಲಿ ಕುತೂಹಲವನ್ನು ಕೆರಳಿಸುತ್ತಿದೆ.

ಈಗಾಗಲೇ ಚಿತ್ರದ ಚಿತ್ರೀಕರಣ ಹಾಗೂ ಬಹುತೇಕ ಪೋಸ್ಟ್ ಪ್ರೊಡಕ್ಷನ್ ಕೆಲಸಗಳನ್ನು ಪೂರ್ಣಗೊಳಿಸಿರುವ ಕುರುಕ್ಷೇತ್ರ ಚಿತ್ರತಂಡ, ಪೋಸ್ಟ್ ಪ್ರೊಡಕ್ಷನ್ ಕೆಲಸದ ಕೊನೇ ಹಂತದಲ್ಲಿ ಬ್ಯುಸಿಯಾಗಿದೆ. ಈಗಾಗಲೇ ವಿಎಫ್ ಎಕ್ಸ್ ವರ್ಕ್ ಬಹುತೇಕ ಕಂಪ್ಲೀಟ್ ಆಗಿದ್ದು, ಇಷ್ಟರಲ್ಲೇ ಚಿತ್ರತಂಡ ಚಿತ್ರದ ಆಡಿಯೋ ಬಿಡುಗಡೆ ಸಮಾರಂಭವನ್ನು ಅದ್ದೂರಿಯಾಗಿ ಮಾಡಲಿದೆ. ಅಲ್ಲದೇ ಚಿತ್ರದ ರಿಲೀಸ್ ದಿನಾಂಕವನ್ನು ಕೂಡ ಸದ್ಯದಲ್ಲೇ ರಿವೀಲ್ ಮಾಡಲಿದೆ. ಪೌರಾಣಿಕ ಸಿನಿಮಾ ಆಗಿರುವ ಕುರುಕ್ಷೇತ್ರ ಚಿತ್ರವನ್ನು ನಾಗಣ್ಣ ನಿರ್ದೇಶಿಸಿದ್ದಾರೆ. ಬಹುತಾರಾಗಣವುಳ್ಳ ಈ ಚಿತ್ರದಲ್ಲಿ ರೆಬೆಲ್ ಸ್ಟಾರ್ ಅಂಬರೀಶ್, ರವಿಚಂದ್ರನ್, ಅರ್ಜುನ್ ಸರ್ಜಾ, ಶಶಿಕುಮಾರ್, ನಿಖಿಲ್ ಕುಮಾರಸ್ವಾಮಿ, ಭಾರತಿ ವಿಷ್ಣುವರ್ಧನ್, ಮೇಘನಾ ರಾಜ್, ಹರಿಪ್ರಿಯಾ ಸೇರಿದಂತೆ ನೂರಾರು ಕಲಾವಿದರು ನಟಿಸಿದ್ದಾರೆ. ಕನ್ನಡ ಸಿನಿಪ್ರಿಯರು ಬಹುದಿನಗಳಿಂದ ಕಾಯುತ್ತಿದ್ದ ಕುರುಕ್ಷೇತ್ರ, ಆದಷ್ಟು ಬೇಗ ಬೆಳ್ಳಿತೆರೆಯ ಮೇಲೆ ಮೂಡಿಬರಲಿದೆ.

# ಟಕ್ಕರ್ ಜಬರ್‌ದಸ್ತ್ ಟೀಸರ್ ಬಿಡುಗಡೆ




ಚಾಲೆಂಜಿಂಗ್ ಸ್ಟಾರ್ ದರ್ಶನ್ ಅವರ ಸೋದರಳಿಯ ಮನೋಜ್ ನಾಯಕನಾಗಿ ನಟಿಸುತ್ತಿರುವ ಚೊಚ್ಚಲ ಚಿತ್ರ ಟಕ್ಕರ್. ಎಸ್.ಎಲ್.ಎನ್. ಕ್ರಿಯೇಷನ್ಸ್ ಲಾಂಛನದಲ್ಲಿ ನಾಗೇಶ್ ಕೋಗಿಲು ಅವರ ನಿರ್ಮಾಣದಲ್ಲಿ ಮೂಡಿಬರುತ್ತಿರುವ ಟಕ್ಕರ್ ಚಿತ್ರದ ಮಜಬೂತಾದ ಟೀಸರ್ ಇದೀಗ ಬಿಡುಗಡೆಗೊಂಡಿದೆ. ನಿರ್ದೇಶಕ ದಿನಕರ್ ತೂಗುದೀಪ ಅವರು ಈ ಚಿತ್ರದ ಟೀಸರ್ ಅನ್ನು ಬಿಡುಗಡೆಗೊಳಿಸಿ ತಮ್ಮ ಅಳಿಯನ ಮೊದಲ ಚಿತ್ರಕ್ಕೆ ಶುಭ ಕೋರಿದ್ದಾರೆ. "ನೀನು ಟಕ್ಕರ್ ಕೊಡೋಕ್ ಬಂದಿರೋದು ಯಾರ್ ಜೊತೆ ಗೊತ್ತಾ? ದಾಸನ್ ಗರಡಿ ಹುಡುಗನ್ ಜೊತೆ" ಎಂದು ನಾಯಕನಾಗಿ ಹೇಳುವ ಮಾಸ್ ಡೈಲಾಗ್ ಮತ್ತು ಅದಕ್ಕೆ ತಕ್ಕುದಾದ ಆ್ಯಕ್ಷನ್ ಸನ್ನಿವೇಶಗಳನ್ನು ಒಳಗೊಂಡಿರೋ ಟಕ್ಕರ್ ಚಿತ್ರದ ಟೀಸರ್ ನಿಜಕ್ಕೂ ಜಬರ್‌ದಸ್ತಾಗಿದೆ. ಈ ಮೂಲಕ ಮನೋಜ್ ತನ್ನ ಮೊದಲ ಚಿತ್ರದಲ್ಲಿಯೇ ಪಕ್ಕಾ ಆ್ಯಕ್ಷನ್ ಅವತಾರದಲ್ಲಿ ಕನ್ನಡ ಪ್ರೇಕ್ಷಕರನ್ನು ಮುಖಾಮುಖಿಯಾಗಲು ತಯಾರಾಗಿರೋದೂ ಕೂಡಾ ಸ್ಪಷ್ಟವಾಗಿದೆ.

ಈ ಹಿಂದೆ ವಿನಯ್ ರಾಜ್‌ಕುಮಾರ್ ಅಭಿನಯದ ರನ್ ಆಂಟನಿ ಎಂಬ ಚಿತ್ರಕ್ಕೆ ಆಕ್ಷನ್ ಕಟ್ ಹೇಳಿದ್ದ ರಘುಶಾಸ್ತ್ರಿ ಅವರ ನಿರ್ದೇಶನದಲ್ಲಿ ಈ ಚಿತ್ರ ಮೂಡಿಬಂದಿದೆ. ಅದಾಗಲೇ ಕಟ್ಟುಮಸ್ತಾದ ದೇಹಾಕಾರವುಳ್ಳ ಮನೋಜ್ ಈ ಚಿತ್ರದ ಮೂಲಕ ಪಕ್ಕಾ ಆಕ್ಷನ್ ಹೀರೋ ಆಗಿ ಆವಿರ್ಭವಿಸಲಿರೋ ಎಲ್ಲಾ ಸೂಚನೆಗಳನ್ನೂ ಕೂಡಾ ಈ ಟೀಸರ್ ರವಾನಿಸಿದೆ. ಆಕ್ಷನ್ ಶೈಲಿಯ ಕಥಾ ಹಂದರ ಹೊಂದಿರೋ ಈ ಚಿತ್ರದಲ್ಲಿ ಪುಟ್ ಗೌರಿ ಮದುವೆ ಖ್ಯಾತಿಯ ನಟಿ ರಂಜನಿ ರಾಘವನ್ ನಾಯಕಿಯಾಗಿ ನಟಿಸಿದ್ದಾರೆ. ಭಜರಂಗಿ ಲೋಕಿ, ಸುಮಿತ್ರಾ, ಲಕ್ಷ್ಮಣ್ ಶಿವಶಂಕರ್, ಅಶ್ವಿನ್ ಹಾಸನ್, ಶಂಕರ್ ಅಶ್ವಥ್, ಕಟುಬಿ ಶ್ರೀಧರ್ ಸೇರಿದಂತೆ ಇನ್ನು ಹಲವಾರು ಪ್ರಮುಖ ಕಲಾವಿದರ ತಾರಾಬಳಗ ಈ ಚಿತ್ರಕ್ಕಿದೆ.

"ನಮ್ಮ ಕುಟುಂಬದಿಂದ ಮತ್ತೊಂದು ಪ್ರತಿಭೆ ಚಿತ್ರರಂಗಕ್ಕೆ ಬರುತ್ತಿದೆ. ಸಾಕಷ್ಟು ವರ್ಷಗಳಿಂದ ನಮ್ಮೆಲ್ಲರ ಜೊತೆ ಸಿನಿಮಾಗಳಲ್ಲಿ ಕೆಲಸ ಮಾಡಿರುವ ನಮ್ಮ ಮನೋಜ್ ಟಕ್ಕರ್ ಸಿನಿಮಾದ ಮೂಲಕ ಹೀರೋ ಆಗಿ ಲಾಂಚ್ ಆಗುತ್ತಿರುವುದರಿಂದ ನಮ್ಮ ತೂಗುದೀಪ ಕುಟುಂಬದ ಎಲ್ಲರೂ ಖುಷಿಯಾಗಿದ್ದಾರೆ. ಮನೋಜ್ ಇನ್ನೂ ತುಂಬಾ ಸಿನಿಮಾಗಳಲ್ಲಿ ನಟಿಸಲಿ, ಚಿತ್ರರಂಗದಲ್ಲಿ ದೊಡ್ಡ ಎತ್ತರಕ್ಕೆ ಬೆಳೆಯಲಿ" ಎಂದು ದಿನಕರ್ ತೂಗುದೀಪ ಹೇಳಿದ್ದಾರೆ. ಈ ಟೀಸರ್ ಬಿಡುಗಡೆಯ ಸಂದರ್ಭದಲ್ಲಿ ಖ್ಯಾತ ಸಂಭಾಷಣೆಕಾರರೂ, ಚಕ್ರವರ್ತಿ ಸಿನಿಮಾದ ನಿರ್ದೇಶಕರೂ ಆದ ಚಿಂತನ್ ಅವರು ಕೂಡ ಹಾಜರಿದ್ದರು.

# ದರ್ಶನ್ ಕೈನೋವು ರಾಬರ್ಟ್ ಶೂಟಿಂಗ್ ಮುಂದಕ್ಕೆ

ಲೋಕಸಭಾ ಚುನಾವಣೆ ಮುಗಿದ ಮರುದಿನವೇ ಚಾಲೆಂಜಿಂಗ್ ಸ್ಟಾರ್ ದರ್ಶನ್ ಅಭಿನಯದ ಮುಂದಿನ ಸಿನಿಮಾ ರಾಬರ್ಟ್ ಶೂಟಿಂಗ್ ಶುರುವಾಗಬೇಕಿತ್ತು. ಆದರೆ ಎಲೆಕ್ಷನ್ ಮುಗಿದ ಬಳಿಕವೂ ಈ ಸಿನಿಮಾದ ಕುರಿತಂತೆ ಯಾವುದೇ ಸುದ್ದಿ ಹೊರಬಿದ್ದಿರಲಿಲ್ಲ. ಕನ್ನಡ ಚಿತ್ರರಂಗದಲ್ಲಿ ಸಾಕಷ್ಟು ನಿರೀಕ್ಷೆಗಳನ್ನು ಈ ಚಿತ್ರ ಹುಟ್ಟುಹಾಕಿದೆ. ಎಲ್ಲವೂ ಅಂದುಕೊಂಡಂತೆ ಆಗಿದ್ದರೆ ನಿನ್ನೆಯೇ ರಾಬರ್ಟ್ ಸಿನಿಮಾದ ಚಿತ್ರೀಕರಣ ಆರಂಭವಾಗಬೇಕಿತ್ತು. ಆದರೆ ರಾಬರ್ಟ್ ಸಿನಿಮಾದ ಚಿತ್ರೀಕರಣ ಈಗ ಒಂದು ವಾರ ಮುಂದಕ್ಕೆ ಹೋಗಿದೆ. ಅಂದರೆ ಮುಂದಿನ ಸೋಮವಾರದಿಂದ ರಾಬರ್ಟ್ ಸಿನಿಮಾದ ಚಿತ್ರೀಕರಣ ಶುರುವಾಗಲಿದೆ. ಉಮಾಪತಿ ಶ್ರೀನಿವಾಸ್ ಅವರ ನಿರ್ಮಾಣದಲ್ಲಿ, ತರುಣ್ ಸುಧೀರ್ ಅವರ ಆ್ಯಕ್ಷನ್ ಕಟ್‌ನಲ್ಲಿ ಮೂಡಿಬರ್ತಿರೋ ಈ ಸಿನಿಮಾದ ಚಿತ್ರೀಕರಣ ಮುಂದಿನ ಸೋಮವಾರದಿಂದ ಶುರುವಾಗಲಿದೆ. ನಂತರ ಒಂದೇ ಶೆಡ್ಯೂಲ್‌ನಲ್ಲಿ ಬ್ರೇಕ್ ಇಲ್ಲದೇ ಸತತ 54 ದಿನಗಳ ಕಾಲ ಚಿತ್ರದ ಚಿತ್ರೀಕರಣ ನಡೆದು ಮುಕ್ತಾಯವಾಗಲಿದೆ.

ದರ್ಶನ್ ಅವರ ಬಲಗೈಗೆ ಅಪಘಾತದ ವೇಳೆ ಗಾಯವಾಗಿತ್ತು. ನಂತರ ಅವರು ತಮಗೆ ಕೈ ನೋವಿದ್ದರೂ ಶೂಟಿಂಗ್‌ನಲ್ಲಿ ಭಾಗಿಯಾಗಿದ್ದಲ್ಲದೆ ಅದಾದ ಬಳಿಕ ಮಂಡ್ಯ ಎಲೆಕ್ಷನ್ ಪ್ರಚಾರದಲ್ಲಿ ಕೂಡ ಭಾಗಿಯಾಗಿದ್ದು, ರಣಬಿಸಿಲಿನಲ್ಲಿ ಎಡಬಿಡದೇ ಪ್ರಚಾರ ಹತ್ತಾರು ದಿನಗಳ ಕಾಲ ಪ್ರಚಾರ ಮಾಡಿ, ಲಕ್ಷಾಂತರ ಜನರನ್ನ ಭೇಟಿ ಮಾಡಿದ ದರ್ಶನ್‌ಗೆ ಸ್ವಲ್ಪವೂ ರೆಸ್ಟ್ ಸಿಗದ ಕಾರಣ ಮತ್ತೆ ಕೈ ನೋವು ಕಾಣಿಸಿಕೊಂಡಿದೆ. ಇದೇ ಕಾರಣದಿಂದ ಪ್ರಚಾರದ ಮಧ್ಯೆಯೂ ಎರಡು ದಿನ ಬಿಡುವು ಮಾಡಿಕೊಂಡು ಮತ್ತೆ ಪ್ರಚಾರಕ್ಕೆ ಧುಮುಕಿದ್ದರು. ಈಗ ದರ್ಶನ್ ಅವರ ಕೈ ನೋವು ಮತ್ತೆ ಹೆಚ್ಚಿದ್ದು, ವೈದ್ಯರ ಸಲಹೆಯ ಮೇರೆಗೆ ವಿಶ್ರಾಂತಿ ಪಡೆಯುತ್ತಿದ್ದಾರೆ. ಜೊತೆಗೆ ಬಿಸಿಲಿನಲ್ಲಿ ಸುತ್ತಾಡಿ ಸ್ವಲ್ಪ ಸುಸ್ತಾಗಿರೋದ್ರಿಂದ ರಾಬರ್ಟ್ ಚಿತ್ರೀಕರಣಕ್ಕೆ ರೆಡಿಯಾಗಲು ಒಂದು ವಾರ ಟೈಮ್ ಕೇಳಿದ್ದಾರೆ, ಹಾಗಾಗಿ ಮುಂದಿನ ಸೋಮವಾರದಿಂದ ರಾಬರ್ಟ್ ಚಿತ್ರದ ಚಿತ್ರೀಕರಣ ಆರಂಭವಾಗಲಿದೆ.

Hosadigantha Kannada Daily Printed & Published by P.S.Prakash on behalf of Jnanabharathi Prakashana Limited. Printed at Dina Sudar Printing Division 11/2, Queen`s Road, Bengaluru 560052 and Published at No. 1/1, 1Floor, 6th cr, 8th Main, Malleshwara, Bengaluru 03 Ph: (080) 23560302, 340 , Editor: P.S.Prakash, Group Editor: Vinayak S. Bhat, Posted at PSO Bengaluru, Bengaluru 26